# ಮಂತ್ರ–ಮಹಿಮೆ

(ನಿಜವಾ–ಸುಳ್ಳಾ)



ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

www.thraithashakam.org





# ಮಂತ್ರ–ಮಹಿಮೆ

## (ಸತ್ಯನಾ–ಅಸತ್ಯನಾ)


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 45/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ – ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

ತಪ್ಪದೆ ಓದಿರಿ! ಓದಿಸಿರಿ!!

# ದೇವಾಲಯ ರಹಸ್ಯಗಳು

ಪ್ರಪಂಚ ಪಟದಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ ದೈವ ಜ್ಞಾನಕ್ಕೆ ಬೆನ್ನೆಲುಬಿನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಠಿ ಆದಿಯಲ್ಲಿ ದೇವರ ಜ್ಞಾನಕ್ಕೆ ಸಂಕೇತಗಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ ಅರ್ಥ ತಿಳಿಯದ ದುರದೃಷ್ಟಕರ ಪರಿಸ್ಥಿತಿಯಲ್ಲಿ ಈದಿನ ನಾವಿದ್ದೇವೆ. ನಮ್ಮ ನಂತರ ಪೀಳಿಗೆಯವರು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಲಾರದ ಸ್ಥಿತಿಯಲ್ಲಿ ದೇವಾಲಯಗಳ ನಿರ್ಮಾಣವನ್ನು ಕೈಯ್ಯಾರಾ ನಾವೇ ಪ್ರಶ್ನಾರ್ಥಕ ಮಾಡಿಕೊಳ್ಳುತ್ತಿದ್ದೇವೆ. ಆಧ್ಯಾತ್ಮಿಕ ರಹಸ್ಯಗಳನ್ನು ದೇವಾಲಯಗಳಲ್ಲಿ ಹೆಜ್ಜೆ ಹೆಜ್ಜೆಗೂ ಆದಿನದ ಜ್ಞಾನಿಗಳು ನಿಕ್ಷಿಪ್ತ ಮಾಡಿರುವಾಗ, ಅವುಗಳನ್ನು ಅನ್ವೇಷಿಸುವವರಿಗೆ ಆ ರಹಸ್ಯಗಳು ತಿಳಿಯದಂತಾಗಿರುವ ಸಮಯದಲ್ಲಿ ಮರುಭೂಮಿಯಲ್ಲಿ ಒಯಾಸಿಸ್ಸಿನ ಹಾಗೆ ಲಭಿಸುವ ಅಪರೂಪವಾದ ಆಧ್ಯಾತ್ಮಿಕ ಗ್ರಂಥವೇ **“ದೇವಾಲಯ ರಹಸ್ಯಗಳು.”**

ಈ ಗ್ರಂಥದಲ್ಲಿ ದೇವಾಲಯ ಗೋಪುರದಿಂದ ಹಿಡಿದು ಗರ್ಭಗುಡಿಯಲ್ಲಿ ಸಾಕಾರ ಪ್ರತಿಮೆವರೆಗೂ, ಮತ್ತೂ ಆ ಪ್ರತಿಮೆಗೆ ಮಾಡುವ ಪೂಜಾ ವಿಧಾನದಲ್ಲಿನ ಪ್ರತಿಯೊಂದು ಕಾರ್ಯಕ್ಕೂ ಸುಲಭ ಶೈಲಿಯಲ್ಲಿ, ಶಾಸ್ತ್ರಬದ್ಧವಾದ ವಿವರ ಕೊಡಲಾಗಿದೆ. ಇಲ್ಲಿಯವರೆಗೂ ಯಾರೂ ಬಿಚ್ಚಿ ಹೇಳಲಾರದ ಆಧ್ಯಾತ್ಮಿಕ ರಹಸ್ಯಗಳ ಗುಟ್ಟನ್ನು ಮೊಟ್ಟಮೊದಲ ಬಾರಿ ಪ್ರಬೋಧಾನಂದ ಯೋಗೀಶ್ವರರು ಪ್ರಪಂಚಕ್ಕೆ ತಿಳಿಯುವಂತೆ ಮಾಡಿದ್ದಾರೆ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಮಂತ್ರ–ಮಹಿಮೆ (ಸತ್ಯನಾ–ಅಸತ್ಯನಾ) 

ಮಂತ್ರಶಕ್ತಿ ಎನ್ನುವ ಮಾತನ್ನು ಕೆಲವು ಕಡೆ ಕೇಳಿದ್ದೇವೆ. ಕೆಲವು ಸಂದರ್ಭಗಳಲ್ಲಿ ಈ ಮಾತನ್ನು ಕೇಳದವರಿರುವುದಿಲ್ಲ. ನವೀನ ಕಾಲದಲ್ಲಿ ಓದಿಕೊಂಡಿರುವವರಿಗೆಲ್ಲ ಮಂತ್ರವೆಂದರೆ ಏನೋ, ಅದಕ್ಕಿರುವ ಶಕ್ತಿ ಎಂದರೆ ಏನೋ ತಿಳಿದಿಲ್ಲ. ಮಂತ್ರದ ಹುಟ್ಟು ಪೂರ್ವೋತ್ತರಗಳನ್ನು ತಿಳಿಯದವರೂ, ನಾಸ್ತಿಕವಾದಿಗಳು, ಮಂತ್ರವೆನ್ನುವುದು ಮಂತ್ರಶಕ್ತಿ ಎನ್ನುವದು ಇಲ್ಲವೇ ಇಲ್ಲ, ಮಂತ್ರಶಕ್ತಿ ಇದೆಯೆನ್ನುವುದು ಪೂರ್ತಿ ಅಸತ್ಯ ಎನ್ನುತ್ತಿದ್ದಾರೆ. ಮಂತ್ರಶಕ್ತಿಯನ್ನು ಕುರಿತು ಕೆಲವರು ಸ್ವಾಮೀಜಿಗಳನ್ನು ಕೇಳಿದರೆ ಅವರು ಹೀಗೆ ಮಾತನಾಡುತ್ತಾ "ಮಂತ್ರವನ್ನು ಕುರಿತು ಏನೂ ತಿಳಿಯದವರು ಅದನ್ನು ಕುರಿತು ತಿಳಿದುಕೊಳ್ಳೋಣ ಎಂದುಕೊಳ್ಳದೆ, ನೇರವಾಗಿ ಮಂತ್ರವನ್ನೇ ಇಲ್ಲೆನ್ನುತ್ತಾರೆ. ಅದನ್ನು ಕುರಿತು ತಿಳಿಯದೆಹೋದ ಮಾತ್ರಕ್ಕೆ ಇಲ್ಲೆನ್ನುವುದು ನ್ಯಾಯವೇನಾ? ವಾಸ್ತವಕ್ಕೆ ಮಂತ್ರವೂ ಇದೆ, ಅದಕ್ಕೊಂದು ಮಹಿಮೆ ಇದೆ" ಎಂದು ಹೇಳಲಾಗಿದೆ. ಕೆಲವರಾದರೆ "ಮಂತ್ರವೆಂದರೆ ಏನು, ಅದಕ್ಕೆ ಶಕ್ತಿ ಇರುತ್ತದಾ" ಎಂದು ಸಹ ಕೇಳುತ್ತಿದ್ದಾರೆ. ಇದನ್ನನುಸರಿಸಿ ನೋಡಿದರೆ ಮಂತ್ರವನ್ನು ಇಲ್ಲ ಎನ್ನುವವರು ಕೆಲವರು, ಇದೆಯೆಂದು ಎನ್ನುವವರು ಕೆಲವರು, ತಿಳಿದುಕೊಳ್ಳಬೇಕೆಂದುಕೊಳ್ಳುವವರು ಕೆಲವರು ಇದ್ದಾರೆಂದು ತಿಳಿಯುತ್ತಿದೆ. ಎಷ್ಟೋ ಜನ ಮನುಷ್ಯರಲ್ಲಿ ಕೆಲವರೇ ಪ್ರಜೆಗಳಿದ್ದಾರೆ. ಪ್ರಜೆಗಳಲ್ಲಿ ಸತ್ಯವನ್ನು ತಿಳಿದುಕೊಳ್ಳಬೇಕೆಂಬ ಅಭಿಲಾಷೆ ಹೊಂದಿರುವವರು ಕೆಲವರು ಮಾತ್ರ ಇದ್ದಾರೆ. ಸತ್ಯಕ್ಕಾಗಿ ಅನ್ವೇಷಿಸುವವರಿಗೆ ನಮಗೆ ತಿಳಿದ ಸತ್ಯವನ್ನು ತಿಳಿಸಬೇಕೆಂದುಕೊಂಡಿದ್ದೇವೆ. ಅಂತಹ ಪ್ರಯತ್ನದಲ್ಲಿ ಮಂತ್ರವನ್ನು ಕುರಿತು, ಅದರ ಶಕ್ತಿಯನ್ನು ಕುರಿತು ಹೇಳಬೇಕೆಂದುಕೊಂಡಿದ್ದೇವೆ.

ಮಂತ್ರಗಳು ಅನೇಕ ಇವೆ, ಹಾಗೆ ಅವುಗಳ ಶಕ್ತಿಗಳು ಕೂಡ ಅನೇಕವಾಗಿ ಇವೆ. ಮಂತ್ರದಶಕ್ತಿ ಸ್ಥೂಲವಾಗಿ ಇದೆ ಮತ್ತು ಸೂಕ್ಷ್ಮವಾಗಿ ಇದೆ. ಮೊದಲು ಸ್ಥೂಲ, ಸೂಕ್ಷ್ಮಗಳನ್ನು ಕುರಿತು ತಿಳಿದುಕೊಂಡರೆ ನಂತರ ವಿಷಯವೆಲ್ಲಾ ಶಾಸ್ತ್ರಬದ್ಧವಾಗಿ ಅರ್ಥವಾಗುತ್ತದೆ. ಉದಾಹರಣೆಗೆ ಭೂಮಿಯೊಳಗೆ ಎರಡು ಅಡಿ ಆಳದಲ್ಲಿ ಊತಿಟ್ಟ ಮೂವತ್ತು ಅಡಿಗಳ ಸ್ಥಂಭವಿದೆಯೆಂದುಕೊಳ್ಳೋಣ.

ಭೂಮಿಯೊಳಗೆ ಹೋಗಿ ಮೇಲಕ್ಕೆ ಇಪ್ಪತ್ತೆಂಟು ಅಡಿಗಳ ಉದ್ದವಿದೆ. ಆ ಸ್ಥಂಭದ ಮೇಲಿನ ತುದಿಯಲ್ಲಿ ಒಂದು ಹಗ್ಗವನ್ನು ಕಟ್ಟಿ ಎಳೆದರೆ ಆ ಸ್ಥಂಭವು ಕೆಳಗೆ ಬೀಳುವುದು. ಸ್ಥಂಭ ಕೆಳಗೆ ಬೀಳುವುದಕ್ಕೆ ಎಷ್ಟು ಬಲ ಬೇಕು ಎಂದು ಮೊದಲು ತಿಳಿಯುವುದಿಲ್ಲ. ಆದ್ದರಿಂದ ಅದನ್ನು ತಿಳಿದುಕೊಳ್ಳುವುದಕ್ಕೆ ಸಮಾನ ಬಲವಿರುವ ಹತ್ತುಜನ ಮನುಷ್ಯರಿಂದ ಎಳೆಸಿದರೆ ಅವರಶಕ್ತಿ ಆ ಸ್ಥಂಭ ಕೆಳಗೆ ಬೀಳುವುದಕ್ಕೆ ಸರಿಹೋಗಲಿಲ್ಲ. ಸ್ಥಂಭವನ್ನು ಕೆಳಗೆ ತಳ್ಳುವುದಕ್ಕೆ ಒಬ್ಬೊಬ್ಬರನ್ನು ಇರುವವರೊಂದಿಗೆ ಜೋಡಿಸಿ ಎಳೆಸಲಾಗಿದೆ. ಆ ವಿಧದಲ್ಲಿ ನಲವತ್ತು ಜನರನ್ನು ಜೊತೆಮಾಡಿ ಎಳೆಸಿದಾಗ ಸ್ಥಂಭ ಕೆಳಗೆ ಬಿದ್ದಿದೆ. ಆಗ ಆ ಸ್ಥಂಭವು ಕೆಳಗೆಬೀಳುವುದಕ್ಕೆ ನಲವತ್ತುಜನ ಬಲ ಅಥವಾ ಶಕ್ತಿ ಬೇಕಾಗಿದೆಯೆಂದು ತಿಳಿಯಿತು. ನಲವತ್ತುಜನ ಎಷ್ಟು ಶಕ್ತಿಯನ್ನು ಉಪಯೋಗಿಸಿ ಎಳೆದಿದ್ದಾರೆಂದು ಒಂದು ಚಿಕ್ಕ ಯಂತ್ರ (ಪವರ್‌ಮೀಟರ್) ದಿಂದ ಅಳೆದು ನೋಡಿದಾಗ, ಒಬ್ಬೊಬ್ಬರು 50 ಕೇಜಿಗಳ ತೂಕಕ್ಕೆ ಸಮಾನವಾದ ಶಕ್ತಿಯನ್ನು ಉಪಯೋಗಿಸಿದ ಹಾಗೆ ತಿಳಿದಿದೆ. ಅದರ ಪ್ರಕಾರ 40 ಜನ 2000 ಕೇಜಿಗಳ ಶಕ್ತಿಯನ್ನು ಉಪಯೋಗಿಸಿದ ಹಾಗೆ ತಿಳಿದಿದೆ. ಈ ವಿಧದಲ್ಲಿ ಒಂದು ಸ್ಥಂಭ ಕೆಳಗೆಬೀಳುವುದಕ್ಕೆ ಎಷ್ಟುಶಕ್ತಿ ಉಪಯೋಗವಾಗಿದೆ ಎಂದು ಸ್ಥೂಲವಾಗಿ ತಿಳಿದುಹೋಗಿದೆ.

ಅದೇ ಆಳದಲ್ಲಿ ಊತಿಟ್ಟ, ಅದೇ ಉದ್ದವಿರುವ ಮತ್ತೊಂದು ಸ್ಥಂಭ, ಕೆಳಗೆಬಿದ್ದ ಮೊದಲ ಸ್ಥಂಭಕ್ಕೆ ಹತ್ತು ಅಡಿಗಳ ದೂರದಲ್ಲಿದೆ. ಮನುಷ್ಯರ ಶಕ್ತಿಯಿಂದ ಮೊದಲನೇ ಸ್ಥಂಭ ಕೆಳಗೆಬಿದ್ದ ಮರುದಿನವೆ ಎರಡನೇ ಸ್ಥಂಭ ಸಹ ಕೆಳಕ್ಕೆ ಬಿದ್ದುಹೋಗಿದೆ. ಎರಡನೇ ಸ್ಥಂಭ ಮನುಷ್ಯರ ಶಕ್ತಿಯಿಂದ ಕೆಳಗೆ ಬೀಳಲಿಲ್ಲ. ಜೋರಾಗಿ ಬೀಸಿದ ಗಾಳಿ ಶಕ್ತಿಗೆ ಎರಡನೇ ಸ್ಥಂಭ ಕೆಳಗೆಬಿದ್ದು ಹೋಗಿದೆ. ಯಾರಿಂದ ಬಿದ್ದರೂ ಅದು ಮೊದಲ ಸ್ಥಂಭ ಕೆಳಬೀಳುವುದಕ್ಕೆ ಎಷ್ಟು ಶಕ್ತಿ ಉಪಯೋಗಪಟ್ಟಿದೆಯೋ ಅಷ್ಟೇ ಶಕ್ತಿ ಉಪಯೋಗಪಟ್ಟಿದೆಯೆಂದು ಹೇಳಬಹುದು. ಮೊದಲ ಸ್ಥಂಭ ಕೆಳಗೆ ಬೀಳುವುದಕ್ಕೆ 40 ಜನರ ಶಕ್ತಿ ಉಪಯೋಗವಾದರೆ, 40 ಮಂದಿ ಮನುಷ್ಯರು ಸ್ಥೂಲವಾಗಿ ಕಾಣಿಸುವುದರಿಂದ,

ಮೊದಲ ಸ್ಥಂಭಕ್ಕೆ ಉಪಯೋಗವಾದ ಶಕ್ತಿಯನ್ನು ಸ್ಥೂಲಶಕ್ತಿ ಎಂದು ಅನ್ನುತ್ತೇವೆ. ಎರಡನೇ ಸ್ಥಂಭ ಕೆಳಬೀಳುವುದಕ್ಕೆ ಕಾರಣವಾದ ಗಾಳಿ ಕಾಣಿಸುವುದಿಲ್ಲ. ಆದ್ದರಿಂದ ಕಣ್ಣಿಗೆ ಕಾಣದ ಶಕ್ತಿಯನ್ನು ಸೂಕ್ಷ್ಮಶಕ್ತಿ ಎಂದು ಅನ್ನುತ್ತಿದ್ದೇವೆ. ಇದರಿಂದ ಬಲ ಅಥವಾ ಶಕ್ತಿ ಎರಡು ವಿಧಗಳಾಗಿ ಸ್ಥೂಲವಾಗಿ, ಸೂಕ್ಷ್ಮವಾಗಿ ಇದೆಯೆಂದು ಹೇಳಬಹುದು. ಒಂದು ಕೇಜಿಕಲ್ಲನ್ನು ಮನುಷ್ಯ ಎತ್ತಿದರೆ ಅದೇನು ವಿಶೇಷವಲ್ಲ, ಅದೇ ಕೇಜಿಕಲ್ಲನ್ನು ಮೇಲಕ್ಕೆ ಎತ್ತಿದವರು ಕಾಣಿಸದಂತೆ ಎತ್ತಿದರೆ ಅದಷ್ಟಕ್ಕದೆ ಮೇಲಕ್ಕೆ ಎದ್ದಹಾಗೆ ಕಾಣಿಸುವುದು. ಆಗ ಅದು ವಿಶೇಷವಾಗಿ ಕಾಣಿಸುವುದು. ಒಂದು ಬಾರಿ ಕೇಜಿಕಲ್ಲು ಮೇಲಕ್ಕೆ ಎದ್ದಾಗ ಮನುಷ್ಯ ಎತ್ತುವುದರಿಂದ ಆಗ ಎಷ್ಟು ಶಕ್ತಿ ಉಪಯೋಗ ವಾಗಿದೆಯೊ, ಎರಡನೇ ಬಾರಿ ಎತ್ತಿದವರ ಶಕ್ತಿ ಕಾಣಿಸದಿದ್ದರೂ ಆಗಲೂ ಸಹ ಅಷ್ಟೇ ಶಕ್ತಿ ಉಪಯೋಗವಾಗಿರುತ್ತದೆಂದು ಹೇಳಬಹುದು. ಇದರ ಪ್ರಕಾರ ಒಂದು ಕೇಜಿಕಲ್ಲು ಒಂದುಬಾರಿ ಮೇಲಕ್ಕೆ ಎದ್ದಾಗ ಎಷ್ಟು ಬಲ ಅವಶ್ಯವೋ, ಆ ನಂತರ ಅದು ಯಾವಾಗ ಎದ್ದರೂ, ಯಾರು ಎತ್ತಿದರೂ ಅದಕ್ಕೆ ಅಷ್ಟೇ ಬಲ ಉಪಯೋಗಪಡುತ್ತದೆ. ಕಾಣಿಸುವ ಮನುಷ್ಯ ಒಂದು ವಸ್ತುವನ್ನು ಬಿಸಾಡಿದರೆ, ಆ ವಸ್ತು ಮನುಷ್ಯನಿಂದ ಬಿಸಾಕಲಾಗಿದೆ ಅನ್ನುತ್ತೇವೆ. ಅದೇ ವಸ್ತು ಗಾಳಿಯಿಂದ ದೂರವಾಗಿ ಹಾಕಿದರೆ ಗಾಳಿಒತ್ತಡದಿಂದ ಅದು ಎಗರಿ ಹೋಗಿದೆ ಅನ್ನುತ್ತೇವೆ. ಅದೇ ವಸ್ತು ಮನುಷ್ಯನಲ್ಲದೆ, ಗಾಳಿ ಅಲ್ಲದೆ ಬಿಸಾಡಲ್ಪಟ್ಟರೆ ಅದನ್ನು ವಿಶೇಷವಾಗಿ ಹೇಳಿಕೊಳ್ಳುತ್ತೇವೆ. ಆದರೆ ಅಲ್ಲಿಯೂ ಸಹ ಒಂದೇ ಅಳತೆಯಿರುವ ಬಲ (ಶಕ್ತಿ) ಉಪಯೋಗಪಟ್ಟಿದೆಯೆಂದು, ಆ ಬಲ ಕಾಣಿಸದ ಸೂಕ್ಷ್ಮಬಲವೆಂದು ಯಾವ ಕಾರಣಕ್ಕೂ ಮನುಷ್ಯರು ಅಂದುಕೊಳ್ಳುವುದಿಲ್ಲ.

ಒಂದು ವಸ್ತು ಒಂದು ಕಡೆಯಿಂದ ಮತ್ತೊಂದು ಕಡೆಗೆ ಬಿಸಾಡಿದರೆ, ಆ ವಸ್ತುವನ್ನು ಬಿಸಾಡಿದ ಬಲ ಕಣ್ಣಿಗೆ ತಿಳಿಯುವ ಮನುಷ್ಯನದಾಗಲಿ, ಸ್ಪರ್ಶಕ್ಕೆ ತಿಳಿಯುವ ಗಾಳಿದಾಗಲಿ ಆದಾಗ, ವಸ್ತು ಬಿಸಾಕಲಾಗಿರುವುದಕ್ಕೆ ಬಲ ಅಥವಾ ಶಕ್ತಿ ಉಪಯೋಗಪಟ್ಟಿದೆಯೆಂದು ಯಾರಾದರೂ ಒಪ್ಪಿಕೊಳ್ಳುವರು. ಆದರೆ

ಮನುಷ್ಯನಿಗಿರುವ ಐದು ಇಂದ್ರಿಯಗಳಿಗು ಬಿಸಾಡುವುದಕ್ಕು ಕಾರಣವಾದ ಬಲ ತಿಳಿಯದಿದ್ದಾಗ, ಬಿಸಾಡಲಾಗಿದ್ದ ವಸ್ತು ಹೇಗೆ ಬಿಸಾಡಲಾಗಿದೆಯೊ ತಿಳಿಯದೆ ಮನುಷ್ಯ ಸ್ವಲ್ಪ ಗೊಂದಲ ಬೀಳುತ್ತಿದ್ದಾನೆ. ಮನುಷ್ಯನ ಇಂದ್ರಿಯಗಳಿಗೆ ತಿಳಿಯದ ಶಕ್ತಿ ಸಹ ಒಂದಿದೆಯೆಂದು ಅರ್ಥಮಾಡಿಕೊಳ್ಳದೆ ಹೋಗುತ್ತಿದ್ದಾನೆ. ವಾಸ್ತವವಾಗಿ ಇಂದ್ರಿಯಗಳಿಗೆ ತಿಳಿಯುವ ಬಲ, ಇಂದ್ರಿಯಗಳಿಗೆ ತಿಳಿಯದ ಬಲ ಎರಡೂ ಇವೆಯೆಂದು ಬಹುಶಃ ಬಹಳ ಜನರಿಗೆ ತಿಳಿದಿಲ್ಲ. ಕಾಣಿಸುವ ಮನುಷ್ಯನ ಬಲವನ್ನು ಸ್ಥೂಲಬಲವೆಂದು, ಕಣ್ಣಿಗೆ ಕಾಣಿಸದೆ ಸ್ಪರ್ಶಕ್ಕೆ ಮಾತ್ರ ತಿಳಿಯುವ ಗಾಳಿಯ ಬಲವನ್ನು ಸೂಕ್ಷ್ಮ ಬಲವೆಂದು ಎರಡು ವಿಧಗಳಾಗಿ ಹೇಳಿಕೊಂಡಾಗ, ಕಣ್ಣಿಗಾಗಲಿ, ಚರ್ಮಕ್ಕಾಗಲಿ, ಯಾವ ಇಂದ್ರಿಯಕ್ಕಾಗಲಿ ತಿಳಿಯದ ಶಕ್ತಿಯನ್ನು (ಬಲವನ್ನು) ಏನೆಂದು ಹೇಳಬೇಕು? ಎಂದು ಪ್ರಶ್ನೆ ಬಾರದೆ ಇರುವುದಿಲ್ಲ. ಅದಕ್ಕೆ ಈ ವಿಧವಾಗಿ ಉತ್ತರವಿದೆ. ಬಲಗಳು ಎರಡು ವಿಧಗಳಲ್ಲಿ ಇವೆ. ಅವುಗಳನ್ನೇ ಇಂದ್ರಿಯಗಳಿಗೆ ತಿಳಿಯುವ ಬಲಗಳೂ, ತಿಳಿಯದ ಬಲಗಳೂ ಎಂದು ಹೇಳುತ್ತಿದ್ದೇವೆ. ಇಂದ್ರಿಯ ಜ್ಞಾನಕ್ಕೆ ತಿಳಿಯದ ಬಲವನ್ನು ಇಂದ್ರಿಯಾತೀತ ಶಕ್ತಿಯಾಗಿ ಸಹ ಹೇಳಿಕೊಳ್ಳುತ್ತಿದ್ದೇವೆ. ಮನುಷ್ಯನ ಇಂದ್ರಿಯಗಳಿಗೆ ತಿಳಿಯುವ ಶಕ್ತಿ (ಬಲ) ಸ್ಥೂಲ, ಸೂಕ್ಷ್ಮ ಎಂದು ಎರಡು ವಿಧಗಳಲ್ಲಿ ಇದ್ದರೆ, ಇಂದ್ರಿಯಗಳಿಗೆ ತಿಳಿಯದ ಶಕ್ತಿಯನ್ನು ಸಹ ಎರಡು ವಿಧಗಳಾಗಿ ಹೇಳುತ್ತಿದ್ದೇವೆ. ಅದರಲ್ಲಿ ಒಂದು ಮಂತ್ರಶಕ್ತಿ, ಎರಡನೆಯದು ದೈವಶಕ್ತಿ ಎಂದು ಹೇಳಬಹುದು. ಮಂತ್ರಶಕ್ತಿಯನ್ನು ಮನುಷ್ಯ ತಯಾರು ಮಾಡಬಹುದು ಅಥವಾ ಸೃಷ್ಠಿಸಬಹುದೆಂದು ಹೇಳುತ್ತೇವೆ. ಆದರೆ ದೈವಶಕ್ತಿಯನ್ನು ಯಾರೂ ಸೃಷ್ಠಿಸಲಾರರು. ದೈವಶಕ್ತಿ ಸಹಜವಾಗಿ ವಿಶ್ವವ್ಯಾಪ್ತವಾಗಿದೆ. ಎಲ್ಲಾ ಕಡೆ ಇರುವ ಶಕ್ತಿಯನ್ನು ಮನುಷ್ಯ ಎಷ್ಟಾದರೂ ಹೊಂದಬಹುದು. ಪ್ರಪಂಚದಲ್ಲಿರುವ ಎಷ್ಟೋ ಗ್ರಹಗಳು, ಉಪಗ್ರಹಗಳು, ಭೂತಗಳು, ಉಪಭೂತಗಳು, ಮಹಾಭೂತಗಳು ದೈವಶಕ್ತಿಯನ್ನು ಹೊಂದಿವೆ. ಅಂತಹ ದೈವಶಕ್ತಿಯನ್ನು ಸಹ ಮನುಷ್ಯ ಪ್ರಯತ್ನ ಮಾಡಿ ಪಡೆಯಬಹುದು. ಇಂದ್ರಿಯಾತೀತವಾದ ಶಕ್ತಿಗಳು ಎರಡು ಇವೆಯೆಂದು ಈಗಿನ ಕಾಲದ ಮನುಷ್ಯರು ತಿಳಿಯದೆ ಹೋಗುವುದಲ್ಲದೆ ಎಲ್ಲಿಯಾದರು ಅವುಗಳ

ಪ್ರಸ್ತಾವನೆ ಬಂದಾಗ, ಅಂತಹವುಗಳು ಯಾವುವು ಇಲ್ಲವೆಂದು, ಅವುಗಳನ್ನು ಯಾರೂ ನಂಬಬಾರದೆಂದು ಹೇಳುತ್ತಿರುವರು.

ಮಂತ್ರಶಕ್ತಿ ಇದೆಯೆಂದು ನಿರೂಪಿಸುತ್ತೀರಾ ಎಂದು ವಿಜ್ಞಾನಿಗಳೆಂದು ಕೊಂಡವರು ಕೆಲವರು ಪ್ರಶ್ನಿಸುತ್ತಿದ್ದಾರೆ. ಇಂದ್ರಿಯಗಳಿಗೆ ತಿಳಿಯದ ಶಕ್ತಿಯನ್ನು ಇಂದ್ರಿಯಗಳಿಗೆ ತಿಳಿಯುವ ಹಾಗೆ ಯಾರೂ ನಿರೂಪಿಸುವುದಕ್ಕೆ ಅವಕಾಶವಿಲ್ಲ. ಆದ್ದರಿಂದ ನಿರೂಪಿಸುತ್ತೀರಾ ಎಂದು ಪ್ರಶ್ನಿಸುವವರಿಗೆ ಯಾರೂ ನಿರೂಪಿಸಲಾರರು. ಮಂತ್ರಶಕ್ತಿಯಾಗಲಿ, ದೈವಶಕ್ತಿಯಾಗಲಿ ಯೋಚಿಸುವವರ ಬುದ್ಧಿಗೆ ತಿಳಿಯುವುದೆ ಆಗಲಿ, ಬಾಹ್ಯವಾಗಿರುವ ಜ್ಞಾನೇಂದ್ರಿಯಗಳಿಗೆ ತಿಳಿಯುವಂತದಲ್ಲ. ಮನುಷ್ಯನ ಶರೀರದೊಳಗಿರುವ ಬುದ್ಧಿಗೂ, ಬಾಹ್ಯೇಂದ್ರಿಯ ಗಳಿಗು ತಿಳಿಯದ ಜ್ಞಾನವನ್ನು ಗ್ರಹಿಸುವ ಸಾಮರ್ಥ್ಯವಿದೆ. ಆದ್ದರಿಂದ ಮಂತ್ರಶಕ್ತಿ ಬಾಹ್ಯವಾಗಿ ಯಾರಿಗೂ ನಿರೂಪಣೆಗೆ ಬರುವುದಿಲ್ಲ. ಅಂತರಂಗದಲ್ಲಿ ಮಾತ್ರ ನಿರೂಪಣೆಗೆ ಬರುವುದು. ಪ್ರತಿ ಮನುಷ್ಯನಿಗೆ ಬುದ್ಧಿಯಿದ್ದರೂ ಅದನ್ನು ಉಪಯೋಗಿಸುವ ವಿಧಾನ ಮನುಷ್ಯನಿಗೆ ತಿಳಿಯದೆ ಹೋಗಿದೆ. ಇಂದಿನ ಉನ್ನತ ವಿದ್ಯೆಯನ್ನು ಓದಿಕೊಂಡಿರುವವರು, ನಾವು ಎಷ್ಟೋ ವಿಜ್ಞಾನಿಗಳೆಂದು ಹೇಳಿಕೊಳ್ಳುವವರು, ಇಂದ್ರಿಯಗಳಿಗೆ ಅಭ್ಯಾಸವಾದವುಗಳನ್ನೇ ತಿಳಿದು ಕೊಳ್ಳುತ್ತಿದ್ದಾರೆ. ಆದರೆ ಇಂದ್ರಿಯಗಳಿಗೆ ಅತೀತವಾದವುಗಳನ್ನು ಕುರಿತು ತಿಳಿಯದೆ ಹೋಗುತ್ತಿದ್ದಾರೆ. ಅಂತಹವರು ತಮ್ಮ ಇಂದ್ರಿಯಗಳಿಂದ ತಿಳಿದ ವಿಷಯಗಳನ್ನೂ, ತಮ್ಮ ಓದಿನಲ್ಲಿ ತಿಳಿದುಬರುವ ವಿಷಯಗಳನ್ನು ಮಾತ್ರವೆ ತಮ್ಮ ಜ್ಞಾಪಕದಲ್ಲಿ ಇಟ್ಟುಕೊಳ್ಳುತ್ತಿದ್ದಾರೆ, ಅವುಗಳನ್ನು ಕುರಿತೆ ಮಾತನಾಡುತ್ತಿದ್ದಾರೆ. ಆದ್ದರಿಂದ ಎಷ್ಟು ದೊಡ್ಡ ವಿಜ್ಞಾನಿಗಳಿಗಾದರು ಮಂತ್ರಶಕ್ತಿಯ ವಿವರವಾಗಲಿ, ದೈವಶಕ್ತಿಯ ಜ್ಞಾನವಾಗಲಿ ಸ್ವಲ್ಪವೂ ತಿಳಿಯದೇ ಹೋಗಿದೆಯೆಂದು ಹೇಳಬಹುದು.

ಒಂದು ವಿಷಯ ತನಗೆ ತಿಳಿಯದೆ ಹೋದ ಮಾತ್ರಕ್ಕೆ ಅದನ್ನು ಪೂರ್ತಿಯಾಗಿ ಇಲ್ಲ ಎನ್ನಬಾರದು. ಉದಾಹರಣೆಗೆ ಅಮೆರಿಕಾವನ್ನು ನೋಡಿದವನು ಒಬ್ಬನಿದ್ದಾಗ, ನೋಡದವರು ನೂರುಜನ ಇದ್ದಾರೆಂದು

ಕೊಳ್ಳೋಣ. ನೂರುಜನ ನೋಡದ ಮಾತ್ರಕ್ಕೆ ಒಬ್ಬನು ನೋಡಿದ ವಿಷಯವನ್ನು ಇಲ್ಲ ಅನ್ನುವುದಿಲ್ಲ ಅಲ್ಲವೆ! ಅದೇ ವಿಧದಲ್ಲಿ ಒಬ್ಬನು ಹೇಳುವ ವಿಷಯವನ್ನು ಸತ್ಯನಾ? ಅಸತ್ಯನಾ? ಎಂದು ಬುದ್ಧಿಯಿಂದ ಯೋಚಿಸದೆ ಇಲ್ಲ ಎನ್ನುವುದು ದಡ್ಡತನವಾಗುತ್ತದೆ. ಆದ್ದರಿಂದ ಒಂದು ವಿಷಯವನ್ನು ಸತ್ಯವೆಂದು ಹೇಳುವುದಕ್ಕೆ ಎಷ್ಟು ಶಾಸ್ತ್ರಬದ್ಧತೆ ಅವಶ್ಯವೊ, ಹಾಗೆ ಒಂದು ವಿಷಯವನ್ನು ಅಸತ್ಯವೆಂದು ಹೇಳುವುದಕ್ಕೆ ಅಷ್ಟೇ ಶಾಸ್ತ್ರಬದ್ಧತೆ ಅವಶ್ಯವೆಂದು ಹೇಳುತ್ತಿದ್ದೇವೆ. ಮೂಢವಾಗಿ ಇಲ್ಲದಿರುವುದನ್ನು ಇದೆಯೆಂದು ಹೇಳುವುದಾಗಲಿ, ಇರುವುದನ್ನು ಇಲ್ಲವೆಂದು ಹೇಳುವುದಾಗಲಿ ನಡೆಯಬಾರದು. ಹಾಗೆ ಅನ್ನುವುದು ವಿಜ್ಞತೆಯಲ್ಲ, ವಿಜ್ಞಾನವೂ ಅಲ್ಲ. ಬುದ್ಧಿಗೆ ತಿಳಿಯುವ ಮಂತ್ರ ಶಕ್ತಿಯನ್ನು ಬುದ್ಧಿಯಿಂದಲೇ ಬೋಧಿಸಿ ತಿಳಿಯಬೇಕು. ಹಾಗಲ್ಲದೆ ಕಣ್ಣಿನಿಂದ ನೋಡಬೇಕೆಂದು, ಹೊರಗಿನ ಇಂದ್ರಿಯ ಗಳಿಗೆ ತಿಳಿಯಬೇಕೆಂದುಕೊಳ್ಳುವುದು ಸರಿಯಲ್ಲ. ಬುದ್ಧಿಗೆ ತಿಳಿಯುವುದು ಕಣ್ಣಿಗೆ ತಿಳಿಯುವುದಿಲ್ಲ. ಕಣ್ಣಿಗೆ ತಿಳಿಯದೆ ಇರುವುದನ್ನು ಇಲ್ಲ ಎನ್ನುವುದು ಬುದ್ಧಿಲೋಪ ಆಗುತ್ತದೆ.

ಪ್ರತಿ ಮನುಷ್ಯನ ಶರೀರದಲ್ಲಿ ಹೊರಗೆ ಕಾಣಿಸದೆ ಒಳಗಿನ ಶರೀರದಲ್ಲಿ ಮುಖ್ಯವಾದ ಶರೀರ ಭಾಗಗಳು ಎರಡು ಇವೆ. ಅದರಲ್ಲಿ ಒಂದು ಮನಸ್ಸು, ಎರಡು ಬುದ್ಧಿ. ಮನಸ್ಸು ಕೇವಲ ಮನನ ಮಾಡುವುದು ಆದ್ದರಿಂದ ಅದನ್ನು ಮನಸ್ಸು ಎಂದಿದ್ದಾರೆ. ಮನಸ್ಸಿಗೆ ಎರಡನೇ ಕೆಲಸ ಕೂಡ ಇದೆ. ಅದು ಸದ್ಯಕ್ಕೆ ನಮಗೆ ಅಗತ್ಯವಿಲ್ಲ. ಹಾಗೆ ಬುದ್ದಿ ಸಹ ಎರಡು ಕೆಲಸಗಳನ್ನು ಮಾಡುತ್ತದೆ. ಅದರಲ್ಲಿ ಮುಖ್ಯವಾದದ್ದು ಯೋಚಿಸುವುದು, ಇನ್ನೊಂದು ಆಲೋಚಿಸುವುದು. ತಲೆಯಲ್ಲಿರುವ ಗುಣಚಕ್ರದಲ್ಲಿನ ಮೂರು ಗುಣಗಳಲ್ಲಿನ ಗುಣವಿಷಯಗಳನ್ನು ಬುದ್ದಿ ಆಲೋಚಿಸುತ್ತಿರುತ್ತದೆ. ಹಾಗೆ ಗುಣಚಕ್ರದೊಳಗಿನ ಮೂರು ಗುಣಭಾಗ ಗಳಿಗೆ ಮಧ್ಯದಲ್ಲಿರುವ ಗುಣಾತೀತವಾದ ಆತ್ಮ ಭಾಗದಲ್ಲಿನ ಜ್ಞಾನವನ್ನು ಕುರಿತು ಬುದ್ಧಿ ಯೋಚಿಸುವುದು ನಡೆಯುತ್ತದೆ. ಇದನ್ನನುಸರಿಸಿದರೆ ಬುದ್ಧಿಯ ಎರಡನೇ ಕೆಲಸ ಎರಡು ವಿಧಗಳಾಗಿ ಇದೆಯೆಂದು, ಅದರಲ್ಲಿ ಒಂದು ಪ್ರಪಂಚ ಗುಣ

ವಿಷಯಗಳನ್ನು ಕುರಿತು ಆಲೋಚಿಸುವುದೆಂದು, ಎರಡನೆಯದು ದೈವಜ್ಞಾನವನ್ನು ಅಥವಾ ಆತ್ಮಜ್ಞಾನವನ್ನು ಕುರಿತು ಯೋಚಿಸುವುದೆಂದು ತಿಳಿಯುತ್ತದೆ. ಈ ವಿಧದಲ್ಲಿ ಆಲೋಚನೆ ಮತ್ತು ಯೋಚನೆ ಎನ್ನುವ ಎರಡು ಬೇರೆಬೇರೆ ಕೆಲಸಗಳನ್ನು ತನ್ನ ಎರಡನೇ ಕೆಲಸವಾಗಿ ಮಾಡುತ್ತಿರುತ್ತದೆ. ಪ್ರತಿ ಮನುಷ್ಯನಲ್ಲಿಯು ಬುದ್ಧಿ, ಮನಸ್ಸು ಅವವುಗಳ ಕೆಲಸಗಳು ಮಾಡುತ್ತಿದ್ದರೂ ಅವೆರಡು ಎಲ್ಲರಲ್ಲೂ ಒಂದೇ ಸಾಮರ್ಥ್ಯ ಹೊಂದಿವೆಯೆಂದು ಹೇಳಲಾರೆವು. ಮನುಷ್ಯ ಮನುಷ್ಯನಿಗೂ ಆಕಾರದಲ್ಲಿ, ಮುಖವರ್ಚಸ್ಸಿನಲ್ಲಿ ಸ್ವಲ್ಪವಾದರು ವ್ಯತ್ಯಾಸವಿದ್ದಹಾಗೆ, ಪ್ರತಿ ಮನುಷ್ಯನಲ್ಲಿಯೂ ಅವಯವಗಳ ಕೆಲಸಗಳಲ್ಲಿ ಅವುಗಳ ಸ್ವರೂಪದಲ್ಲಿ ಸ್ವಲ್ಪದರಲ್ಲಿ ಸ್ವಲ್ಪ ವ್ಯತ್ಯಾಸವಿರುವುದು. ಒಬ್ಬ ಮನುಷ್ಯನಲ್ಲಿ ಮನಸ್ಸು ಬಲವಾಗಿದ್ದು ಜ್ಞಾಪಕಶಕ್ತಿಯನ್ನು ಅಮಿತವಾಗಿ ಹೊಂದಿರುತ್ತದೆ. ಆದರೆ ಅದೇ ಮನುಷ್ಯನಲ್ಲಿನ ಬುದ್ಧಿ ಕಡಿಮೆ ಬಲವನ್ನು ಹೊಂದಿದ್ದು ಯೋಚಿಸುವುದರಲ್ಲಾಗಲಿ, ಆಲೋಚಿಸುವುದರಲ್ಲಾಗಲಿ ಪೂರ್ತಿಯಾಗಿ ಹಿಂದೆಬಿದ್ದಿರುವನು. ಕೆಲವರಲ್ಲಾದರೆ ಬುದ್ಧಿಗೆ ಆಲೋಚನಾಬಲ ಹೊಂದಿದ್ದರೂ ಯೋಚನಾಬಲ ಇಲ್ಲದೆ ಇರುವುದು. ಕೆಲವರಲ್ಲಿ ಮನಸ್ಸಿಗೆ ಜ್ಞಾಪಕಶಕ್ತಿ ಕಡಿಮೆಯಿದ್ದು ಬುದ್ಧಿಗೆ ಆಲೋಚನೆ, ಯೋಚನಾ ಬಲಗಳು ಎರಡು ಹೊಂದಿರುವರು.

ಇಸ್ಲಾಮ್ ಮತದಲ್ಲಿ ಬೋಧಕನಾಗಿರುವ ಒಬ್ಬ ವ್ಯಕ್ತಿಯನ್ನು ನೋಡಿದ್ದೇನೆ ಆತನ ಉಪನ್ಯಾಸಗಳನ್ನು ಕೇಳಿದ್ದೇನೆ. ಆತನು ಪುಸ್ತಕಗಳಲ್ಲಿ ನೋಡಿದ ಪ್ರತಿ ವಿಷಯವನ್ನು ಪೂರ್ತಿಯಾಗಿ ಜ್ಞಾಪಕವಿಟ್ಟುಕೊಂಡು ಹೇಳುತ್ತಿದ್ದಾನೆ. ವಿಶೇಷವೇನೆಂದರೆ ಆತನು ತನ್ನ ಮತ ಗ್ರಂಥಗಳ ವಿಷಯಗಳನ್ನೇ ಅಲ್ಲದೆ ಬೈಬಲ್‌ನಲ್ಲಿನ ಯಾವ ವಾಕ್ಯವನ್ನಾದರು ಹೇಳುತ್ತಿದ್ದಾನೆ. ಅಷ್ಟೇ ಅಲ್ಲದೆ ಹಿಂದೂ ಧರ್ಮವಾದ ಭಗವದ್ಗೀತೆಯಲ್ಲಿನ ಶ್ಲೋಕಗಳನ್ನಾಗಲಿ, ವೇದಗಳಲ್ಲಿನ ಮಂತ್ರಗಳನ್ನಾಗಲಿ, ಉಪನಿಷತ್‌ಗಳಲ್ಲಿನ ವಾಕ್ಯಗಳನ್ನಾಗಲಿ, ಧಾರಾಳವಾಗಿ ಕಂಠಪಾಠವಾಗಿ ಹೇಳುತ್ತಿದ್ದನು. ಅಷ್ಟೇ ಅಲ್ಲದೆ, ಇಂತಹ ಗ್ರಂಥದಲ್ಲಿ, ಇಂತಹ ಪುಟದಲ್ಲಿ ಇದೇ ವಾಕ್ಯ ಬರೆದಿದ್ದಾರೆ ಎಂದು, ಇದೇ ಶ್ಲೋಕ ಬರೆಯಲಾಗಿದೆ

ಎಂದು, ಬಹಳ ಜ್ಞಾಪಕದಿಂದ ಹೇಳುತ್ತಿದ್ದನು. ಆತನ ಸಭೆಯಲ್ಲಿರುವ ಪ್ರತಿ ಒಬ್ಬರೂ ಆತನ ಜ್ಞಾಪಕಶಕ್ತಿಗೆ ಆಶ್ಚರ್ಯವಾಗುತ್ತಿದ್ದರು. ಡಿ.ವಿ.ಡಿ.ಗಳ ರೂಪದಲ್ಲಿರುವ ಆತನ ಉಪನ್ಯಾಸಗಳನ್ನು ನೋಡಿದ ನಮಗೂ ಸಹ ಆತನ ಜ್ಞಾಪಕಶಕ್ತಿಯನ್ನು ನೋಡಿ ಬಹಳ ಆಶ್ಚರ್ಯವೆನಿಸಿತು. ಹಾಗೆ ಆತನ ಜ್ಞಾಪಕಶಕ್ತಿ ಇತರರನ್ನೂ ಸಹ ಅಷ್ಟೇ ಆಶ್ಚರ್ಯಪಡಿಸುತ್ತಿತ್ತು. ಇದಕ್ಕೆಲ್ಲಾ ಕಾರಣ ಆತನ ಶರೀರದಲ್ಲಿನ ಮನಸ್ಸಿಗಿರುವ ಬಲವೆಂದು ಹೇಳಬಹುದು. ಹಾಗೆ ಆ ವ್ಯಕ್ತಿ ಶರೀರದಲ್ಲಿನ ಬುದ್ಧಿಗೆ ಸ್ಥೂಲ ವಿಷಯಗಳಾದ ಗುಣ ವಿಷಯಗಳನ್ನೂ, ಪ್ರಪಂಚ ವಿಷಯಗಳನ್ನೂ ಆಲೋಚಿಸುವ ಶಕ್ತಿ ಸಹ ಇದೆ. ಆದರೆ ಸೂಕ್ಷ್ಮಗಳಾದ ಆತ್ಮ ವಿಷಯಗಳನ್ನಾಗಲಿ, ದೈವಿಕ ವಿಷಯಗಳನ್ನಾಗಲಿ ಯೋಚಿಸುವ ಸಾಮರ್ಥ್ಯವು ಆತನ ಬುದ್ಧಿಗೆ ಸ್ವಲ್ಪವೂ ಇಲ್ಲದಾಗಿದೆ. ಆದ್ದರಿಂದ ಆತನ ಉಪನ್ಯಾಸಗಳಲ್ಲಿ ಆತನು ಯೋಚಿಸಿ ಹೇಳಿರುವುದು ಎಲ್ಲಿಯೂ ಕಾಣಿಸಲಿಲ್ಲ. ಆತನು ಕೇಳಿರುವುದನ್ನು ಓದಿರುವುದನ್ನು ಮಾತ್ರ ಜ್ಞಾಪಕ ಇಟ್ಟುಕೊಂಡು ಹೇಳುತ್ತಿದ್ದಾನೆ. ಹಾಗೆ ಹೇಳುವುದು ಮನಸ್ಸಿನ ಬಲದಿಂದ ನಡೆಯುತ್ತದೆ. ಆತನು ಹೇಳುವುದೆಲ್ಲಾ ಸ್ಥೂಲವಿಷಯಗಳೆ, ಸೂಕ್ಷ್ಮ ವಿಷಯಗಳು ಒಂದೂ ಸಹ ಇಲ್ಲ. ಆದ್ದರಿಂದ ಸೂಕ್ಷ್ಮ ವಿಷಯಗಳನ್ನು ಗ್ರಹಿಸಿಕೊಳ್ಳುವ ಶಕ್ತಿ ಆತನ ಬುದ್ಧಿಗೆ ಇಲ್ಲವೆಂದು ತಿಳಿದುಹೋಗುತ್ತದೆ.

ಆತನ ಬುದ್ಧಿ ಸೂಕ್ಷ್ಮವಾದ ವಿಷಯಗಳನ್ನು ಗ್ರಹಿಸಿಕೊಳ್ಳುವುದರಲ್ಲಾಗಲಿ, ಯೋಚಿಸುವುದರಲ್ಲಾಗಲಿ ಯಾವ ಕಾರಣಕ್ಕೂ ಬಲವಿಲ್ಲದ್ದೆಂದು ನನಗೆ ಸ್ವಲ್ಪ ಅರ್ಥವಾದ ನಂತರ ಆ ವಿಷಯಗಳನ್ನು ದೃಢಪಡಿಸಿಕೊಳ್ಳುವುದಕ್ಕೆ, ಒಂದು ಸಂದರ್ಭದಲ್ಲಿ ಆತನನ್ನು ಬೇಟಿಯಾಗಿ ಮಾತನಾಡುವುದು ನಡೆದಿದೆ. ಖುರಾನ್ ಗ್ರಂಥದಲ್ಲಿ ಎಷ್ಟೋ ಸೂಕ್ಷ್ಮವಾದ ದೈವವಾಕ್ಯಗಳು ಇವೆ. ಅಂತಹ ವಾಕ್ಯಗಳಲ್ಲಿ 33ನೇ ಸುರಾ ಅದ "ಅಲ್‌ಅಹ್‌ಜಾಬ್" ಎನ್ನುವ ಅಧ್ಯಾಯದಲ್ಲಿ 40ನೇ ಆಯತ್ ಹೀಗಿದೆ. **"ಪ್ರಜೆಗಳೆ ಮುಹಮ್ಮದ್ (ಸಂ॥) ನಿಮ್ಮ ಗಂಡಸರಲ್ಲಿ ಯಾರಿಗೂ**

**ತಂದೆಯಲ್ಲ. ಆದರೆ ಆತನು ಅಲ್ಲಾಹ್‌ಯೊಂದರ ಸಂದೇಶಹರನು. ಪ್ರವಕ್ತರ ಪರಂಪರೆಯನ್ನು ಪರಿಸಮಾಪ್ತ ಮಾಡುವ ಕೊನೆಯವನು. ಅಲ್ಲಾಹ್ ಪ್ರತಿಯೊಂದು ತಿಳಿದವನು."** ಈ ವಾಕ್ಯವನ್ನು ಕುರಿತು ಆ ವ್ಯಕ್ತಿಯನ್ನು ಕೇಳಲಾಯಿತು. ನಾನು ನಾಲ್ಕು ಖುರಾನ್ ಗ್ರಂಥಗಳಲ್ಲಿ ಒಂದೇ ವಾಕ್ಯವನ್ನು ಕುರಿತು ನೋಡಿದ್ದೇನೆ. ಒಂದೊಂದು ಗ್ರಂಥದಲ್ಲಿನ ವಾಕ್ಯದಲ್ಲಿ ಸ್ವಲ್ಪ ವ್ಯತ್ಯಾಸ ಕಾಣಿಸಿದರೂ, ಭಾವ ಮಾತ್ರ ಒಂದೇಯೆಂದು ಅರ್ಥವಾಗಿದೆ. ನಿಮ್ಮಲ್ಲಿನ ಯಾವ ಪುರುಷನಿಗು ಪ್ರವಕ್ತ ತಂದೆಯಲ್ಲ ಅಂದರೂ, ನಿಮ್ಮ ಗಂಡಸರಲ್ಲಿ ಯಾರಿಗೂ ತಂದೆಯಲ್ಲ ವೆಂದರೂ ಒಂದೇ ಅರ್ಥ ಬರುವುದು. ಮೂರು ಗ್ರಂಥಗಳಲ್ಲಿ **"ಪ್ರವಕ್ತರ ಪರಂಪರೆಯನ್ನು ಪರಿಸಮರ್ಪಣೆ ಮಾಡುವ ಕೊನೆಯವನೆಂದು ಇದ್ದರೆ, ಖುರಾನ್ ಮಜಿದ್ ಗ್ರಂಥದಲ್ಲಿ ಆತನು ಎಲ್ಲರ ಪ್ರವಕ್ತರಿಗು ಮುದ್ರೆ"** ಎಂದು ಇದೆ. ಮುದ್ರೆ ಎಂದರೆ ಏನು ಎಂದು ಕೇಳಿದೆವು. ಅದಕ್ಕೆ ಆತನು "ಅರಬಿಕ್ ಭಾಷೆಯಲ್ಲಿನ ವಾಕ್ಯದಲ್ಲಿ ಖಾತಮುನ್ ಎನ್ನುವ ಪದಕ್ಕೆ ಮುದ್ರೆ ಎಂದು ಅರ್ಥ. ಮುದ್ರೆ ಎನ್ನುವುದು ಒಂದು ಪ್ರಕ್ರಿಯೆ ಪೂರ್ತಿಯಾದ ಮೇಲೆ ಬೀಳುತ್ತದೆ. ಮುದ್ರೆ ಬಿದ್ದ ನಂತರ ಆ ಕೆಲಸ ಎಲ್ಲ ವಿಧಗಳಲ್ಲಿ ಪೂರ್ತಿಯಾದ ಹಾಗೆ ಲೆಕ್ಕ. ಆದ್ದರಿಂದ ಮಹಮ್ಮದ್ ಪ್ರವಕ್ತ ಬಂದಿರುವುದರಿಂದ ಪ್ರವಕ್ತರ ಪರಂಪರೆಗೆ ಸೀಲು ಬಿದ್ದಿದೆಯೆಂದು ಆತನ ನಂತರ ಪ್ರವಕ್ತರ್‍ಯಾರೂ ಬರುವುದಿಲ್ಲವೆಂದು ಅರ್ಥ ಎಂದಿದ್ದಾನೆ. ಅದರ ನಂತರ ಹೀಗೆ ಕೇಳಿದೆನು.

**ನಾನು :-** ಪ್ರವಕ್ತ ನಿಮ್ಮ ಪುರುಷರಲ್ಲಿ ಯಾರಿಗೂ ತಂದೆಯಲ್ಲ ಎಂದು ಇದೆ. ಯಾರಿಗೂ ತಂದೆಯಲ್ಲ ಎನ್ನುವ ವಿಷಯ ಅಲ್ಲಿ ಹೇಳಬೇಕಾದ ಅಗತ್ಯ ಏನು ಬಂದಿದೆ. ಆತನು ಪ್ರವಕ್ತರಿಗೆ ಎಲ್ಲರಿಗೂ ಕೊನೆಯ ಪ್ರವಕ್ತ ಅನ್ನುವ ಮಾತು ಹೇಳಿ ನಂತರ ದೇವರಿಗೆ ಸರ್ವವೂ ತಿಳಿದಿದೆ ಎಂಬ ಮಾತು ಕೊನೆಯಲ್ಲಿ ಸರಿಹೋಗಿದೆ. ಆದರೆ ಮೊದಲೇ ಮಹಮ್ಮದ್ ಪ್ರವಕ್ತ ಯಾವ ಪುರುಷನಿಗು ತಂದೆಯಲ್ಲ ಎಂದು ಹೇಳುವುದರಲ್ಲಿ ಆಂತರ್ಯವೇನು?

**ಆತನು :-** ಆತನು ಸಾಯುವಾಗ ಪ್ರವಕ್ತರ ಇಬ್ಬರು ಕುಮಾರರು ಯಾರೂ ಸಜೀವವಾಗಿ ಇಲ್ಲ. ಆದ್ದರಿಂದ ಆತನು ಯಾವ ಪುರುಷನಿಗು ತಂದೆಯಲ್ಲ ಎಂದು ಹೇಳಿದ್ದಾನೆ. ನಾಲ್ಕುಜನ ಕುಮಾರಿಯರಲ್ಲಿ ಮೂವರು ಮೊದಲೆ ಸತ್ತುಹೋಗಿದ್ದಾರೆ. ಚಿಕ್ಕ ಮಗಳಾದ ಪಾತಿಮಾ ಒಬ್ಬಳು ಮಾತ್ರ ಪ್ರವಕ್ತರು ಮರಣಹೊಂದಿದ ನಂತರ ಆರು ತಿಂಗಳಿಗೆ ಸತ್ತುಹೋಗಿದ್ದಾಳೆ. ಆತನು ಮರಣಿಸುವ ಸಮಯಕ್ಕೆ ಆತನು ಯಾವ ಪುರುಷನಿಗೂ ತಂದೆಯಲ್ಲ ಎಂದರೆ ಆತನಿಗೆ ಕುಮಾರರು ಇಲ್ಲವೆಂದು ಅರ್ಥ.

ಈಗ ಆ ಬೋಧಕನು ಹೇಳಿದಹಾಗೆ ಯಾವಕಡೆ ನೋಡಿದರು ಆತನ ಮಾತು ಸರಿಯಾದ ಸಮಾಧಾನ ಅಲ್ಲವೆಂದು ತಿಳಿಯುತ್ತಿದೆ. ತಿರುಗಿ ನಾವು ಪ್ರಶ್ನಿಸಿದರೆ ಅದಕ್ಕೆ ಉತ್ತರ ಎಷ್ಟು ಹುಡುಕಿದರೂ ಇರುವುದಿಲ್ಲ. ಒಂದುಬಾರಿ ಸಂತತಿ ಹೊಂದಿದವನನ್ನು ಬಾಹ್ಯವಾಗಿ ತಂದೆ ಎಂದೇ ಅನ್ನುತ್ತೇವೆ. ಮಗ ಬದುಕಿದ್ದರೇ ತಂದೆಯೆಂದು, ಬದುಕಿಲ್ಲದೆ ಹೋದರೆ ತಂದೆಯಲ್ಲವೆಂದು ಬಾಹ್ಯ ಸಮಾಜದಲ್ಲಿ ಯಾರೂ ಅನ್ನುವುದಿಲ್ಲ. ಅಷ್ಟೇ ಅಲ್ಲದೆ ಗಂಡು ಮಕ್ಕಳನ್ನು ಹೆತ್ತಿದ್ದರು, ಹೆಣ್ಣು ಮಕ್ಕಳನ್ನು ಹೆತ್ತಿದ್ದರು ಹೆತ್ತವರನ್ನು ತಾಯಿ ತಂದೆಯೆನ್ನುತ್ತೇವೆ, ಇಲ್ಲಿ ಹೆಣ್ಣುಮಕ್ಕಳನ್ನು ಬಿಟ್ಟು ಗಂಡು ಸಂತತಿಗೆ ಮಾತ್ರ ತಂದೆ ಅನ್ನುವುದು ಸಮಾಜದಲ್ಲಿ ಎಲ್ಲಿಯೂ ಅನ್ವಯಿಸುವುದಿಲ್ಲ. ಸತ್ತುಹೋದ ಕುಮಾರರಿಗೆ ತಂದೆಯಲ್ಲ ಎಂದು ಅಂದರೆ, ಆತನ ಹೆಂಡತಿಯರು ತಪ್ಪುಮಾಡಿ ಸಂತತಿ ಪಡೆದಿದ್ದಾರೆಂದು ಸಮಾಜದಲ್ಲಿ ಲೆಕ್ಕಿಸುವರು. ಗಮನಿಸಬೇಕಾದ ವಿಷಯ ವೇನೆಂದರೆ! ವಾಕ್ಯವನ್ನು ಚೆನ್ನಾಗಿ ಗಮನಿಸಿದರೆ ನಿಮ್ಮ ಪುರುಷರಲ್ಲಿ ಯಾರಿಗೂ ತಂದೆಯಲ್ಲ ಎಂದು ಜಿಬ್ರಯೇಲ್ ದೂತ ಹೇಳಿದಹಾಗಿದೆ. ಜಿಬ್ರಯೇಲ್ ದೈವದೂತನೇ ಅಲ್ಲದೆ, ಅತ್ಯಂತ ಉನ್ನತವಾದ ಜ್ಞಾನವಿರುವವನು. ಆತನು ಹೇಳಿದ ಮಾತು ಅತ್ಯಂತ ಬೆಲೆಯುಳ್ಳದ್ದು. ಮುಸ್ಲಿಮ್ ಬೋಧಕನು ಹೇಳಿದಹಾಗೆ ಆ ಮಾತು ಬಾಹ್ಯ ಅರ್ಥಕ್ಕೆ ಅನ್ವಯಿಸುವುದಿಲ್ಲ. ಆ ಮಾತಿನಲ್ಲಿ ಏನೋ ಅಂತರಾರ್ಥವಿದೆ. ಬಾಹ್ಯಾರ್ಥವಾಗಿ ಹೇಳಿದರೆ ಆ ಮಾತು ಪೂರ್ತಿ ತಪ್ಪಾಗುತ್ತದೆ.

ಇಲ್ಲಿ ಇನ್ನೊಂದು ಮುಖ್ಯವಾದ ವಿಷಯವೇನೆಂದರೆ! ಮಹಮ್ಮದ್ ಪ್ರವಕ್ತ ಸಾಯುವ ಸಮಯದಲ್ಲಾಗಲಿ, ಸತ್ತ ನಂತರವಾಗಲಿ ಹೇಳಿದ ವಾಕ್ಯವಲ್ಲ ಅದು. ಮಹಮ್ಮದ್ ಪ್ರವಕ್ತ ಬದುಕಿದ್ದಾಗ, ಆತನು ಆರೋಗ್ಯವಾಗಿ ಇದ್ದಾಗ, ಆತನ ಕುಮಾರರು ಸಹ ಬದುಕಿರುವಾಗ ಜಿಬ್ರಯೇಲ್ ದೂತ ಪ್ರವಕ್ತನನ್ನು ಕುರಿತು ಹೇಳಿದ ವಾಕ್ಯವದು. ಆ ವಾಕ್ಯವನ್ನು ಬಾಹ್ಯಾರ್ಥವಾಗಿ ತೆಗೆದುಕೊಂಡರೆ ಕೆಳಗೆ ಹೇಳಿದ ಮಾತಿಗೂ, ಮೇಲೆ ಹೇಳಿದ ಮಾತಿಗೂ ಯಾವ ಸಂಬಂಧವೂ ಇಲ್ಲ. ನಂತರ ಅದಕ್ಕೆ ಬಾಹ್ಯಾರ್ಥವನ್ನು ಹೇಳಿದರೆ ಸಮಾಜ ಯಾವ ವಿಧವಾಗಿಯೂ ಆ ಮಾತನ್ನು ಒಪ್ಪಿಕೊಳ್ಳುವುದಿಲ್ಲ.

ಎಲ್ಲಾ ವಿಧಗಳಲ್ಲಿ ವಿವರವಾಗಿ ನೋಡಿದರೆ ಜಿಬ್ರಯೇಲ್ ಹೇಳಿದ ಮಾತು ಪರಮಾರ್ಥದಿಂದ ಕೂಡಿಕೊಂಡಿದೆ. ಸೂಕ್ಷ್ಮವಾದ ಭಾವನೆಗಳೊಂದಿಗೆ ಖುರಾನ್ ಕೂಡಿಕೊಂಡಿದೆಯೆಂದು ಖುರಾನ್ ಗ್ರಂಥದಲ್ಲಿ 3ನೇ ಸುರಾ, 7ನೇ ಆಯತ್‌ನಲ್ಲಿ ಹೇಳಿದಹಾಗೆ ಯಾವ ಮನುಷ್ಯನಾದರೂ ತನ್ನ ಬುದ್ಧಿಯಿಂದ ಯೋಚಿಸಿ ನೋಡದೆ ಹೋದರೆ ಅದರ ನಿಜವಾದ ಅರ್ಥ ತಿಳಿಯುವುದಿಲ್ಲ. ಮೇಲೆ ತನ್ನೊಂದಿಗೆ ಮಾತನಾಡಿದ ಮುಸ್ಲಿಮ್ ಬೋಧಕನು ಎಷ್ಟೊ ಜ್ಞಾಪಕಶಕ್ತಿಯಿರುವವನಾದರು, ಆತನ ಬುದ್ಧಿ ಬಾಹ್ಯ ಆಲೋಚನೆಗಳನ್ನು ಮಾಡುವುದಾದರೂ, ನಿಗೂಢವಾಗಿರುವ ಸೂಕ್ಷ್ಮವಾದ ಪರಮಾರ್ಥಗಳನ್ನು ಯೋಚಿಸುವ ಬಲವಿಲ್ಲದ್ದೆಂದು ಹೇಳಬಹುದು. ಯೋಚಿಸುವ ಬುದ್ಧಿ ಬಲವಿರುವವರು ಮಾತ್ರ 33ನೇ ಸುರಾ 40ನೇ ಆಯತ್‌ಗೆ ಅರ್ಥ ಹೇಳಬಲ್ಲರು. ಆ ವಾಕ್ಯದಲ್ಲಿ ತನ್ನ ಕುಮಾರರಿಗೆ ಎಂದು ಹೇಳದೆ, ನಿಮ್ಮ ಪುರುಷರಲ್ಲಿ ಎಂದು ಏಕೆ ಹೇಳಿದ್ದಾನೆಂದು ಸಹ ಪ್ರಶ್ನೆ ಬರಬಹುದು. ಎಲ್ಲದಕ್ಕು ಸರಿಯಾದ ಸಮಾಧಾನ ಬುದ್ಧಿಗೆ ಬಲ ಇರುವಾಗಲೇ ದೊರಕುತ್ತದೆಂದು ಹೇಳುತ್ತಿದ್ದೇವೆ. ಬುದ್ಧಿ ಬಲವಿಲ್ಲದೆ ಸೂಕ್ಷ್ಮವಾದ ದೈವಿಕ ವಿಧಾನ ಪೂರ್ತಿ ಹೇಗೆ ತಿಳಿಯದೆ ಹೋಗುತ್ತಿದೆಯೊ, ಹಾಗೆ ಬುದ್ಧಿಬಲವಿಲ್ಲದೆ ಸೂಕ್ಷ್ಮವಾದ ಮಂತ್ರಗಳ ವಿಧಾನವೂ, ಅದರ ಶಕ್ತಿ ತಿಳಿಯದೆ ಹೋಗುವುದು. ಎಷ್ಟು ಜ್ಞಾಪಕಶಕ್ತಿ ಇರುವವರಾದರೂ

ಖುರಾನ್ ಗ್ರಂಥದಲ್ಲಿನ 33ನೇ ಸುರಾ 40ನೇ ವಾಕ್ಯಗಳಲ್ಲಿನ ಭಾವವನ್ನು ಗ್ರಹಿಸದೆ ಹೋಗುವುದಕ್ಕೆ ಕಾರಣ ಅವರ ಬುದ್ಧಿಗೆ ಯೋಚಿಸುವ ಶಕ್ತಿ ಇಲ್ಲದೆ ಇರುವುದು. ಅವರ ಮನಸ್ಸು ಬಲಹೊಂದಿದ್ದು ಹೆಚ್ಚಿನ ಜ್ಞಾಪಕಶಕ್ತಿ ಹೊಂದಿರುವುದಾದರೂ, ಅವರಲ್ಲಿನ ಬುದ್ಧಿ ಸ್ಥೂಲವಾಗಿ ಆಲೋಚಿಸುವ ಶಕ್ತಿಯಿರುವುದಾದರು, ಅವರ ಬುದ್ಧಿ ಸೂಕ್ಷ್ಮವಾದ ವಾಕ್ಯಗಳನ್ನು ಯೋಚಿಸುವ ಶಕ್ತಿಯಿಲ್ಲದಾದ್ದರಿಂದ ಅಸಲಾದ ನಿಗೂಢ ಸೂಕ್ಷ್ಮ ವಿಷಯಗಳನ್ನು ತಿಳಿಯುವುದಿಲ್ಲ.

ಯೋಚಿಸುವ ಬುದ್ಧಿ ಬಲವಿಲ್ಲದ ಮನುಷ್ಯ ಯಾರಾದರಾಗಲಿ, ಮಂತ್ರ ಶಕ್ತಿಯನ್ನಾಗಲಿ, ದೈವಶಕ್ತಿಯನ್ನಾಗಲಿ ತಿಳಿಯುವುದಿಲ್ಲ, ವಿಶ್ವಾಸಿಸುವುದಿಲ್ಲ. ಮಂತ್ರಶಕ್ತಿಯನ್ನು ಮತ್ತು ದೈವಶಕ್ತಿಯನ್ನು ಅಭೌತಿಕ ಎನ್ನುತ್ತೇವೆ. ಅಭೌತಿಕವು ಭೌತಿಕ ಶರೀರ ಅವಯವಗಳಿಗೆ ತಿಳಿಯುವುದಿಲ್ಲ. ಅಭೌತಿಕವಾದ ಸೂಕ್ಷ್ಮ ವಿಷಯಗಳು ಸೂಕ್ಷ್ಮವಾಗಿ ಯೋಚಿಸುವ ಬುದ್ಧಿಯಿರುವವನಿಗೆ ತಿಳಿಯುವುದು. ಆದ್ದರಿಂದ ಹೊರಗೆ ಎಷ್ಟು ಮೇಧಾವಿಗಳಾದರೂ, ಎಷ್ಟೇ ನೆನಪಿನ ಶಕ್ತಿ ಇದ್ದವರಾದರೂ, ದೈವವಾಕ್ಯದಲ್ಲಿನ ಪರಮಾರ್ಥವನ್ನು ತಿಳಿಯಲಾರರು. ಹಾಗೆ ಮಂತ್ರದಲ್ಲಿನ ಶಕ್ತಿಯನ್ನು ಗ್ರಹಿಸಲಾರರು. ಶಕ್ತಿ ಅಥವಾ ಬಲ ಸ್ಥೂಲ ಮತ್ತು ಸೂಕ್ಷ್ಮವೆಂದು ಎರಡು ವಿಧಗಳಿವೆ. ಸ್ಥೂಲ ಶಕ್ತಿಯನ್ನು ಮನುಷ್ಯ ಹೊರಗಿನ ಯಂತ್ರಗಳಿಂದ ಸಹ ಸೃಷ್ಠಿಸುತ್ತಿದ್ದಾನೆ. ಮನುಷ್ಯನ ಶರೀರಕ್ಕಿರುವ ಶಕ್ತಿ ನೂರು ಕೇಜಿಗಳ ತೂಕವನ್ನು ಮೇಲಕ್ಕೆ ಎತ್ತುವ ಸಾಮರ್ಥ್ಯ ಹೊಂದಿದ್ದರೂ, ಮನುಷ್ಯನಿಂದ ತಯಾರಿಸಲ್ಪಟ್ಟ ಯಂತ್ರ ಬಲವು ಎಷ್ಟೋ ಪಟ್ಟು ಹೆಚ್ಚಿಗೆ ಇರುವುದು. ತಯಾರು ಮಾಡಿದ ಯಂತ್ರವನ್ನನುಸರಿಸಿ ಅದರ ಬಲವಿರುತ್ತದೆ. ಒಬ್ಬ ಮನುಷ್ಯ ಒಂದು ಸ್ಥೂಲವಾದ ಯಂತ್ರಬಲವನ್ನು ಸೃಷ್ಠಿಸಿದ ಹಾಗೆ, ಸೂಕ್ಷ್ಮವಾದ ಮಂತ್ರಬಲವನ್ನು ಸಹ ಸೃಷ್ಠಿಸಬಲ್ಲನು. ಒಬ್ಬ ಮನುಷ್ಯನ ಶರೀರ ಬಲಕ್ಕಿಂತ ಯಂತ್ರಬಲ ಎಷ್ಟೋ ಪಟ್ಟು ಹೆಚ್ಚಿಗೆ ಇದ್ದರೂ, ಯಂತ್ರ ಬಲಕ್ಕಿಂತ ಮಂತ್ರ ಬಲ ಇನ್ನೂ ಹೆಚ್ಚು ಪಟ್ಟು ಇರಬಹುದು. ಯಂತ್ರ ಚಿಕ್ಕದಾದರೆ ಚಿಕ್ಕಬಲ, ದೊಡ್ಡದಾದರೆ ದೊಡ್ಡಬಲ ತಯಾರಾದ ಹಾಗೆ, ಮಂತ್ರದ

ವಿಧಾನವನ್ನನುಸರಿಸಿ ಮಂತ್ರಬಲ ಹೆಚ್ಚು ಕಡಿಮೆ ಇರುವುದು. ಯಂತ್ರಬಲವನ್ನು ಕುದುರೆಯ ಬಲದೊಂದಿಗೆ ಹೋಲಿಸಿ ಹಾರ್ಸ್‌ಪವರ್ ಎಂದು ಹೇಳುತ್ತಾರೆ. ಒಂದು ಯಂತ್ರದ ಶಕ್ತಿ ಹತ್ತು ಹಾರ್ಸ್ ಪವರ್ ಇದ್ದರೆ, ಅದಕ್ಕಿಂತ ದೊಡ್ಡ ಯಂತ್ರದ ಶಕ್ತಿ ನೂರು ಹಾರ್ಸ್ ಪವರ್‌ವರೆಗು ಇರಬಹುದು. ಈ ವಿಧವಾಗಿ ಆಯಾ ಯಂತ್ರಗಳನ್ನನುಸರಿಸಿ ಅವುಗಳ ಶಕ್ತಿ ಇರುವಹಾಗೆ, ಆಯಾ ಮಂತ್ರಗಳನ್ನನುಸರಿಸಿ ಅವುಗಳ ಶಕ್ತಿ ಇರುವುದು.

ಈಗಿನ ಕಾಲದಲ್ಲಿ ಸ್ಥೂಲಯಂತ್ರ ಶಕ್ತಿಯನ್ನು ಕುದುರೆಯ ಶಕ್ತಿಯಾಗಿ (ಹಾರ್ಸ್‌ಪವರ್‌ಆಗಿ) ಹೇಳಿದಹಾಗೆ, ಪೂರ್ವಕಾಲದಲ್ಲಿ ಸ್ಥೂಲ ಶಕ್ತಿಯನ್ನು **"ಶಸ್ತ್ರಶಕ್ತಿಯೆಂದು"** ಹೇಳುತ್ತಿದ್ದರು. ಹಾಗೆ ಸೂಕ್ಷ್ಮವಾದ ಮಂತ್ರಶಕ್ತಿಯನ್ನು **"ಅಸ್ತ್ರಶಕ್ತಿಯೆಂದು"** ಹೇಳುತ್ತಿದ್ದರು. ಪೂರ್ವದಲ್ಲಿ ಯುದ್ಧರಂಗಗಳಲ್ಲಿ ಮಾತ್ರವೆ ಅಸ್ತ್ರ, ಶಸ್ತ್ರಗಳ ಪ್ರಸ್ತಾವನೆ ಬರುತ್ತಿತ್ತು. ಶತ್ರುಗಳು ಉಪಯೋಗಿಸುವ ಸ್ಥೂಲಶಕ್ತಿಯನ್ನು ಶಸ್ತ್ರವೆಂದು, ಸೂಕ್ಷ್ಮ ಶಕ್ತಿಯನ್ನು ಅಸ್ತ್ರ ಎನ್ನುತ್ತಿದ್ದರು. ಪೂರ್ವವು ಯಂತ್ರಗಳ ಬಲವನ್ನು ಕಡಿಮೆಯಾಗಿ, ಮಂತ್ರಗಳ ಬಲವನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಇಂದಿನ ಕಾಲದಲ್ಲಿ ಯಂತ್ರಬಲ ಹೊರತು, ಮಂತ್ರಬಲ ಎಂದರೆ ಏನೊ ಯಾರಿಗೂ ತಿಳಿಯದೆ ಹೋಗಿದೆ. ಪೂರ್ವದಲ್ಲಿ ಯಂತ್ರವನ್ನು ಉಪಯೋಗಿಸುವವನನ್ನು **"ಯಾಂತ್ರಿಕನು"** ಅನ್ನುತ್ತಿದ್ದರು. ಹಾಗೆ ಒಂದು ಮಂತ್ರವನ್ನು ಉಪಯೋಗಿಸುವವನನ್ನು **"ಮಾಂತ್ರಿಕನು"** ಎಂದು ಅನ್ನುತ್ತಿದ್ದರು. ಪೂರ್ವವು ಕೆಲವು ಕಡೆ ಯಂತ್ರಬಲದ ಅಗತ್ಯವಿದ್ದಾಗ, ಅಲ್ಲಿ ಮಂತ್ರಬಲದ ಅಗತ್ಯ ಇಲ್ಲದಾಗಿತ್ತು. ಹಾಗೆ ಕೆಲವು ಕಡೆ ಪೂರ್ತಿಯಾಗಿ ಮಂತ್ರಬಲದ ಅಗತ್ಯವೂ ಸಹ ಇರುತ್ತಿತ್ತು. ಯಂತ್ರಬಲವೂ, ಮಂತ್ರಬಲವೂ ಎರಡೂ ಅಲ್ಲದೆ, ಎರಡಕ್ಕಿಂತ ದೊಡ್ಡದು, ಬಲವಾದದ್ದು ದೈವಬಲ ಅಥವಾ ಆತ್ಮಬಲ ಎನ್ನುವ ಮೂರನೇ ಶಕ್ತಿ ಸಹ ಒಂದಿದೆ. ಆತ್ಮಬಲವನ್ನು ಹೊಂದಿದವರು ಬಹಳ ಅಪರೂಪವಾಗಿ ಇರುತ್ತಿದ್ದರು. ಯಾಂತ್ರಿಕರು, ಮಾಂತ್ರಿಕರು ಇದ್ದಹಾಗೆ ಆತ್ಮಶಕ್ತಿಯಿರುವ **"ತಾಂತ್ರಿಕರು"** ಸಹ ಪೂರ್ವದಲ್ಲಿ ಇರುತ್ತಿದ್ದರು. ಈಗಿನ ಕಾಲದಲ್ಲಿ ಮಾಂತ್ರಿಕರೆ

ಇಲ್ಲದೆ ಹೋಗಿರುವಾಗ, ತಾಂತ್ರಿಕರು ಕಾಣಿಸುವುದು ಬಹಳ ಅಪರೂಪವಾಗಿದೆ. ಆಧ್ಯಾತ್ಮಿಕ ವಿದ್ಯೆಯಲ್ಲಿ ಆತ್ಮವನ್ನು "ತಾ" ಅನ್ನುವ ಅಕ್ಷರವಾಗಿ, ಜೀವಾತ್ಮನನ್ನು "ತ" ಎನ್ನುವ ಅಕ್ಷರವಾಗಿ, ಪರಮಾತ್ಮನನ್ನು "ಗು" ಎನ್ನುವ ಅಕ್ಷರವಾಗಿ ಹೇಳಿಕೊಳ್ಳಲಾಗುತ್ತದೆ. ಆತ್ಮಕ್ಕೆ ಗುರುತಾಗಿ ಧೀರ್ಘವಿರುವ "ತಾ" ಇರುವುದರಿಂದ ಆತ್ಮಬಲ ಇರುವವನನ್ನು ತಾಂತ್ರಿಕನೆಂದು ಅನ್ನುತ್ತಿದ್ದರು. ಇತ್ತೀಚಿಗೆ ಭೂಮಿ ಯಮೇಲೆ ತಾಂತ್ರಿಕರು ಅಪರೂಪವಾಗಿ ಹೋಗಿದ್ದಾರೆ.

ಒಂದು ಯಂತ್ರವನ್ನು ಮಂತ್ರದಿಂದ ಕೆಲಸ ಮಾಡದ ಹಾಗೆ ನಿಲ್ಲಿಸಬಹುದು. ಹಾಗೆ ಒಂದು ಮಂತ್ರವನ್ನು ತಾಂತ್ರಿಕದಿಂದ ಕೆಲಸ ಮಾಡದಹಾಗೆ ನಿಲ್ಲಿಸಬಹುದು. ಇದರಿಂದ ಒಂದು ಯಂತ್ರಕ್ಕಿಂತ ಮಂತ್ರ ದೊಡ್ಡದೆಂದು, ಒಂದು ಮಂತ್ರಕ್ಕಿಂತ ತಾಂತ್ರಿಕ ದೊಡ್ಡದೆಂದು ತಿಳಿಯುತ್ತದೆ. ಆದರೆ ಈಗಿನ ಕಾಲದಲ್ಲಿ ಯಂತ್ರಶಕ್ತಿ ಬೆಳೆದು ಹೋಗಿ, ಮಂತ್ರಶಕ್ತಿ ಅಂದರೆ ಏನೂ ತಿಳಿಯದೆ ಹೋಗಿದೆ. ಪೂರ್ವದಲ್ಲಿ ಒಂದು ಸಮಯದಲ್ಲಿ ಎಷ್ಟೋ ಹೆಸರು ಹೊಂದಿರುವುದು ಮಂತ್ರಶಕ್ತಿ. ಮಂತ್ರಬಲ ದೊಡ್ಡದೆಂದು ತಿಳಿದವರು ಮಂತ್ರಗಳನ್ನು ಕುರಿತು ಹೇಳನವಾಗಿ ಮಾತನಾಡುತ್ತಿರಲಿಲ್ಲ. ಮಂತ್ರಬಲ ವಿರುವವರನ್ನು ನೋಡಿದರೆ ಗೌರವವಾಗಿ ಮಾತನಾಡಿಸುತ್ತಿದ್ದರು. ಆದರೆ ಈದಿನ ಮಂತ್ರಗಳನ್ನು ಕುರಿತಾಗಲಿ, ಮಂತ್ರ ಬಲವನ್ನು ಕುರಿತಾಗಲಿ ತಿಳಿದವರು ಇಲ್ಲದೆ ಹೋಗಿದ್ದಾರೆ. ಮಂತ್ರವನ್ನು ಕುರಿತು ತಿಳಿಯದೆ ಹೋಗುವುದರಿಂದ ಮಂತ್ರಗಳನ್ನು ಕುರಿತು ಹೇಳನವಾಗಿ ಮಾತನಾಡುವವರು ತಯಾರಾಗಿದ್ದಾರೆ. ಅಂತಹ ಪರಿಸ್ಥಿತಿಯಲ್ಲಿ ಮಂತ್ರಗಳಿಗೆ ಮಾವಿನಕಾಯಿಗಳು ಉದುರುತ್ತವಾ? ಎಂದು ಮಂತ್ರವನ್ನು ಕುರಿತು ಅಗೌರವವಾಗಿ ಮಾತನಾಡುತ್ತಿದ್ದಾರೆ. ಪೂರ್ವದಲ್ಲಿ ಮಂತ್ರಗಳಿಗೆ ಮಾವಿನಕಾಯಿಗಳೆ ಅಲ್ಲ ತಲೆಗಳು ಸಹ ಉದುರುತ್ತಿದ್ದವು. ಆದರೆ ಈಗಿನ ಕಾಲದಲ್ಲಿ ಮಂತ್ರಗಳೆ ತಿಳಿಯದೆ ಹೋಗಿರುವುದರಿಂದ ಯಾರೇನು ಮಾತನಾಡಿದರೂ ನಡೆದುಹೋಗುತ್ತಿದೆ. ಈಗಿನ ಕಾಲದಲ್ಲಿ ಸಹ ಎಲ್ಲೋ ಒಂದುಕಡೆ ನಮಗೆ ಮಂತ್ರಗಳು ತಿಳಿದಿದೆಯೆಂದು, ನಮಗೆ ಮಂತ್ರ ವಿದ್ಯೆಗಳು

ಬರುವವೆಂದು, ನಮಗೆ ಮಂತ್ರಶಕ್ತಿ ಇದೆಯೆಂದು ಹೇಳಿಕೊಳ್ಳುವವರು ಇದ್ದಾರೆ. ವಾಸ್ತವಕ್ಕೆ ಅವರಿಗೆ ಮಂತ್ರಗಳು ಅಂದರೆ ಏನೊ ತಿಳಿದಿಲ್ಲ. ಆದರೂ ಹೊರಗಿನ ಮನುಷ್ಯರಿಂದ ಗೌರವದಿಂದಿರುವುದಕ್ಕೆ, ಮಂತ್ರಗಳಿವೆಯೆನ್ನುವ ನೆಪದಿಂದ ಹಣ ಸಂಪಾದಿಸಿಕೊಳ್ಳುವುದಕ್ಕೆ, ಇತರರನ್ನು ಭಯಪಡಿಸುವುದಕ್ಕೆ ಆ ವಿಧವಾಗಿ ಹೇಳುತ್ತಿದ್ದಾರೆ. ಇಂತಹ ಮೋಸಗಳನ್ನು ನೋಡಿದ ವಿಜ್ಞಾನಿಗಳು ಕೆಲವರು ಮಂತ್ರಗಳೆಂದರೆ ಮೋಸವೆಂದು, ಅಸತ್ಯವೆಂದು ಹೇಳುತ್ತಿದ್ದಾರೆ. ಮಂತ್ರಗಳ ನೆಪದಿಂದ ಕೆಲವರು ಮೋಸಮಾಡಿದ ಮಾತ್ರಕ್ಕೆ ಮಂತ್ರಗಳು ಅಸತ್ಯವಲ್ಲ, ಯಂತ್ರಗಳಿಗೆ ಅಭ್ಯಾಸವಾದ ಮನುಷ್ಯ ಮಂತ್ರಗಳನ್ನು ಕುರಿತು ತಿಳಿದುಕೊಳ್ಳದೆ ಹೋಗುವುದು ದುರದೃಷ್ಟವೆಂದು ಹೇಳಬಹುದು. ಇಲ್ಲಿ ಒಂದು ಸೂತ್ರವನ್ನು ಮನುಷ್ಯ ನೆನಪಿನಲ್ಲಿಟ್ಟುಕೊಳ್ಳಬೇಕು. ತನಗೆ ತಿಳಿದಿರುವುದು ಸತ್ಯ, ತಿಳಿಯದಿರುವುದು ಅಸತ್ಯ ಎನ್ನುವುದು ಒಳ್ಳೆಯದಲ್ಲ. **ಒಂದು ವಿಷಯ ತಿಳಿದ ನಂತರ ಸತ್ಯವಾದಾಗ ಅದೇ ವಿಷಯವು ತಿಳಿಯದಿರುವಾಗ ಸಹ ಸತ್ಯವಾಗಿಯೇ ಇರುವುದು**. ಪೂರ್ವವು ಮಂತ್ರ ಎಲ್ಲರಿಗೂ ತಿಳಿದ ಸತ್ಯ. ಪ್ರಸ್ತುತ ಕಾಲದಲ್ಲಿ ಕೆಲವರಿಗೆ ತಿಳಿಯದೆ ಹೋದ ಮಾತ್ರಕ್ಕೆ ಸತ್ಯ ಅಸತ್ಯವಾಗಿ ಬದಲಾಗುವುದೆ? ಹಾಗೆ ಎಂದಿಗೂ ಬದಲಾಗುವುದಿಲ್ಲ. ಮಂತ್ರಕ್ಕಿರುವ ಸತ್ಯ ಎಂದಿಗೂ ಸತ್ಯವಾಗಿಯೇ ಇರುತ್ತದೆ. ಪೂರ್ವದಲ್ಲಿ ಮಂತ್ರಕ್ಕಿದ್ದ ಸತ್ಯವೇನೊ, ಶಾಸ್ತ್ರಬದ್ಧತೆ ಏನೋ ನಮಗೆ ತಿಳಿದಿದೆ ಆದ್ದರಿಂದ ಮಂತ್ರವನ್ನು ಕುರಿತು ಹೇಳುತ್ತಿದ್ದೇನೆ.

ಯಂತ್ರ ಸ್ಥೂಲವಾದದ್ದು, ಅದರ ಕೆಲಸ ಮತ್ತು ಫಲಿತ ಸ್ಥೂಲವಾಗಿರುವುದಾಗಿ ಇರುವುದು. ಇನ್ನು ಮಂತ್ರವಿಷಯಕ್ಕೆ ಬಂದರೆ ಮಂತ್ರ ಶಬ್ದರೂಪವಾದ್ದರಿಂದ, ಅದು ಹೊರಗೆ ತಿಳಿಯುತ್ತಿದ್ದರೂ ಅದರ ಕೆಲಸವೂ, ಹಾಗೆ ಅದರ ಫಲಿತವೂ ಸೂಕ್ಷ್ಮವಾಗಿ ಕಣ್ಣಿಗೆ ಕಾಣಿಸದ ವಿಧದಲ್ಲಿ ಇರುವುದು. ಮಂತ್ರ ಎಂದರೆ ಮಹಿಮೆ ಇರುವಂತಹದ್ದು ಅಥವಾ ಶಕ್ತಿಇರುವಂತಹದ್ದು ಎಂದು ಹೇಳಿಕೊಳ್ಳಬಹುದು. ಒಂದೊಂದು ಶಬ್ದವನ್ನು ಒಂದೊಂದು ಮಂತ್ರವಾಗಿ ಹೇಳಬಹುದು. ಹಾಗೆ ಕೆಲವು ಶಬ್ದಗಳ ಸೇರುವಿಕೆಯನ್ನು ಸಹಾ ಮಂತ್ರವಾಗಿ

ಹೇಳಬಹುದು. ವಿವಿಧ ವ್ಯತ್ಯಾಸಗಳಿರುವ ಶಬ್ದದ ಸಮ್ಮೇಳನಗಳನ್ನು ವಿವಿಧ ಮಂತ್ರಗಳಾಗಿ ಹೇಳಬಹುದು. ಈ ಸೂತ್ರದ ಪ್ರಕಾರ ಪ್ರತಿ ಮಾತನ್ನು ಒಂದು ಮಂತ್ರವಾಗಿ ಲೆಕ್ಕಿಸಬಹುದು. ಆದ್ದರಿಂದ ಪೂರ್ವದಲ್ಲಿ ಅನುಭವಗ್ನರಾದ ಹಿರಿಯರು **"ಭೂಮಿಮೇಲೆ ಔಷಧವಲ್ಲದ ಎಲೆಯಿಲ್ಲ, ಮಂತ್ರವಲ್ಲದ ಮಾತಿಲ್ಲ"** ಎಂದು ಅನ್ನುತ್ತಿದ್ದರು. ಇದರ ಪ್ರಕಾರ ಮಂತ್ರಗಳು ಯಾವ ಭಾಷೆಯಲ್ಲಿದ್ದರೂ ಆ ಶಬ್ದವನ್ನನುಸರಿಸಿ ಆ ಮಂತ್ರಕ್ಕೆ ಶಕ್ತಿ ಇರುತ್ತದೆಂದು ತಿಳಿಯಬೇಕು. ಮಂತ್ರವನ್ನು ಕುರಿತು ವಿವರವಾಗಿ ತಿಳಿಯುವುದಕ್ಕೆ, ಉದಾಹರಣೆಯಾಗಿ ಒಂದು ಯಂತ್ರವನ್ನು ಹೋಲಿಸಿ ವಿವರಿಸುತ್ತೇನೆ ಚೆನ್ನಾಗಿ ಅರ್ಥಮಾಡಿಕೊಳ್ಳಿ. ಕೆಲವು ಪರಿಕರಗಳನ್ನು ಜೊತೆಮಾಡಿದರೆ ಒಂದು ಯಂತ್ರ ತಯಾರಾದ ಹಾಗೆ, ಕೆಲವು ಶಬ್ದಗಳನ್ನು ಜೊತೆಮಾಡಿದರೆ ಒಂದು ಮಂತ್ರವಾಗುತ್ತದೆ. ಜೊತೆಮಾಡಿದ ಬೇರೆ ಬೇರೆ ಪರಿಕರಗಳನ್ನನುಸರಿಸಿ ಬೇರೆ ಬೇರೆ ಯಂತ್ರಗಳು ತಯಾರಾದ ಹಾಗೆ, ಜೊತೆಗೂಡಿಸಿದ ಬೇರೆ ಬೇರೆ ಶಬ್ದಗಳನ್ನನುಸರಿಸಿ ಬೇರೆ ಬೇರೆ ಮಂತ್ರಗಳು ತಯಾರಾಗುವವು. ಉದಾಹರಣೆಗೆ ಜೊತೆಮಾಡಲಾದ ಪರಿಕರಗಳನ್ನು ಅನುಸರಿಸಿ ಒಂದು ಬಸ್ಸು ತಯಾರಾಗಿದೆಯೆಂದುಕೊಳ್ಳೋಣ. ಬಸ್ಸು ತಯಾರಾದ ಮಾತ್ರಕ್ಕೆ ಅದು ರಸ್ತೆಯ ಮೇಲೆ ಓಡುವುದಿಲ್ಲ. ಅದು ರಸ್ತೆಯ ಮೇಲೆ ಪ್ರಯಾಣಕ್ಕೆ ಉಪಯೋಗವಾಗಬೇಕೆಂದರೆ ಅದಕ್ಕೆ ಇಂಧನವಾದ ಡೀಜಿಲ್ ಬೇಕು, ನಂತರ ಅದನ್ನು ನಡೆಸುವ ಡ್ರೈವರ್ ಬೇಕು. ಕೆಲವರು ಪ್ರಯಾಣಿಕರು ಒಂದು ಊರಿನಿಂದ ಮತ್ತೊಂದು ಊರಿಗೆ ಪ್ರಯಾಣಿಸಬೇಕೆಂದರೆ ಒಂದು ಬಸ್ಸು, ಎರಡು ಇಂಧನ (ಎಣ್ಣೆ) ಮೂರನೆಯದು ನಡೆಸುವವನು ಬೇಕಾಗುತ್ತಾನೆ. ಬಸ್ಸು ತಯಾರಾದಹಾಗೆ ಜೊತೆಮಾಡಿದ ಶಬ್ದಗಳಿಂದ ಒಂದು ಮಂತ್ರ ತಯಾರಾಗಿಯೆಂದುಕೊಳ್ಳೋಣ. ಬಸ್ಸು ನಡೆಯುವುದಕ್ಕೆ ಇಂಧನ ಹೇಗೆ ಅಗತ್ಯವೋ ಹಾಗೆ ಮಂತ್ರಕ್ಕೆ ಉಚ್ಛಾರಣೆ ಸಿದ್ಧಿ ಬೇಕು. ಉಚ್ಛಾರಣೆ ಎಂದರೆ ಜಪಿಸುವುದೆಂದು, ಸಿದ್ಧಿ ಎಂದರೆ ಕೆಲಸಮಾಡುವುದಕ್ಕೆ ಎಲ್ಲಾವಿಧಗಳಲ್ಲಿ ಸಿದ್ಧವಾಗಿ ಇದೆಯೆಂದು ಅರ್ಥ. ಬಸ್ಸು, ಅದಕ್ಕೆ ಇಂಧನವಿದ್ದಾಗ ಬಸ್ಸನ್ನು ನಡೆಸುವ ವ್ಯಕ್ತಿ ಬೇಕು ಅಂದಹಾಗೆ, ಮಂತ್ರವು, ಮಂತ್ರಸಿದ್ಧಿಯಿರುವಾಗ ಆ ಮಂತ್ರವನ್ನು ಉಪಯೋಗಿಸುವ ವ್ಯಕ್ತಿ ಬೇಕು.

ಬಸ್ಸನ್ನು ನಡೆಸುವವನು ಡ್ರೈವರ್ ಆದಾಗ, ಮಂತ್ರವನ್ನು ಉಪಯೋಗಿಸುವವನು ಮಾಂತ್ರಿಕನಾಗುತ್ತಾನೆ. ತಯಾರು ಮಾಡಿರುವ ಬಸ್ಸಿಗೆ ಇಂಧನವನ್ನು ಯಾರಾದರೂ ಹಾಕಬಹುದು. ಇಂಧನ ಹಾಕಿದ ವ್ಯಕ್ತಿಯೆ ಅಲ್ಲದೆ ನಡೆಸುವ ವಿಧಾನ ತಿಳಿದ ಯಾರಾದರೂ ಡ್ರೈವರ್ ಆಗಿ ಬಸ್ಸನ್ನು ನಡೆಸಬಹುದು. ಆದರೆ ಮಂತ್ರದ ವಿಷಯದಲ್ಲಿ ಮಂತ್ರವನ್ನು ಯಾರು ಸಿದ್ಧಿಮಾಡಿಕೊಂಡಿರುತ್ತಾರೊ ಅವರೇ ಆ ಮಂತ್ರವನ್ನು ಉಪಯೋಗಿಸಬೇಕು. ಇಂಧನವನ್ನು ಹಾಕಿದವನೇ ಬಸ್ಸನ್ನು ನಡೆಸಬೇಕು ಎನ್ನುವದು ಮಂತ್ರ ವಿಧಾನದಲ್ಲಿ ಇದೆ. ಬಸ್ಸು, ಇಂಧನ, ಡ್ರೈವರ್ ಈ ಮೂರು ಸರಿಯಾಗಿದ್ದಾಗ ಸುಗಮವಾಗಿ ಪ್ರಯಾಣಸಾಗುತ್ತದೆ. ಅದೇ ವಿಧದಲ್ಲಿ ತಯಾರು ಮಾಡಿದ ಮಂತ್ರ ಯಾವುದಕ್ಕಾಗಿ ತಯಾರು ಮಾಡಿದ್ದಾರೊ ತಿಳಿದು, ಅದನ್ನು ಸಿದ್ಧಿಹೊಂದಿ, ಉಪಯೋಗಿಸುವ ಮಾಂತ್ರಿಕ ನಿದ್ದರೆ ಆ ಮಂತ್ರದ ಫಲವನ್ನು ಹೊಂದಬಹುದು. ಮಾಂತ್ರಿಕನಿದ್ದು ಮಂತ್ರಸಿದ್ಧಿ ಇಲ್ಲದಿದ್ದರೆ, ಮಂತ್ರವಿದ್ದು ಮಾಂತ್ರಿಕನು ಇಲ್ಲದಿದ್ದರೆ ಏನು ಪ್ರಯೋಜನ ವಿರುವುದಿಲ್ಲ.

ಈಗ ಕೆಲವರಿಗೆ ಮಂತ್ರಸಿದ್ಧಿ ಎಂದರೆ ಏನು? ಎಂಬ ಪ್ರಶ್ನೆ ಬರಬಹುದು. ಅದಕ್ಕೆ ಸಮಾಧಾನ ಈ ವಿಧವಾಗಿದೆ. ಮೊದಲು ಮಂತ್ರವನ್ನು ತಯಾರು ಮಾಡುವವನು ನಡೆಯಬೇಕಾದ ಕೆಲಸವನ್ನು ದೃಷ್ಠಿಯಲ್ಲಿಟ್ಟುಕೊಂಡು ಮಂತ್ರವನ್ನು ತಯಾರು ಮಾಡಲಾಗುತ್ತದೆ. ಒಂದು ಯಂತ್ರವನ್ನು ಮೊದಲು ಕಂಡುಹಿಡಿದವನು ಆ ಯಂತ್ರವನ್ನು ಸೃಷ್ಠಿಸಿದವನಾಗುತ್ತಾನೆ. ನಂತರ ಆ ಯಂತ್ರಗಳನ್ನು ಯಾರು ತಯಾರು ಮಾಡಿದರೂ ಅವರು ಮೊದಲನೆಯವನು ತಯಾರು ಮಾಡಿದ ನಮೂನೆಯನ್ನು ಅನುಸರಿಸಿಯೆ ಮಾಡುತ್ತಾನೆ. ಆದ್ದರಿಂದ ಆ ಯಂತ್ರಕ್ಕೆ ಮೊದಲು ಮಾಡಿದವನು ಸೃಷ್ಠಿಕರ್ತನಾದರೆ, ನಂತರ ಆತನನ್ನು ಅನುಸರಿಸಿ ಮಾಡಿದವರೆಲ್ಲರೂ ಆ ಯಂತ್ರಕ್ಕೆ ಕಾರ್ಯಕರ್ತರಾಗುತ್ತಾರೆ. ಅದೇ ವಿಧವಾಗಿ ಒಂದು ಮಂತ್ರವನ್ನು ಒಂದು ಕೆಲಸದ ನಿಮಿತ್ತ ಶಬ್ದಗಳನ್ನು ಕೂಡಿಸಿ ತಯಾರು ಮಾಡಿದವನು ಆ ಮಂತ್ರಕ್ಕೆ ಸೃಷ್ಠಿಕರ್ತನಾದರೆ, ಅದೇ ಮಂತ್ರವನ್ನು

ಎಷ್ಟು ಜನ ಸಿದ್ಧಿಮಾಡಿಕೊಂಡರು ಅವರೆಲ್ಲರು ಮಾಂತ್ರಿಕರಾಗುತ್ತಾರೆ. ಮೊದಲು ಒಂದು ಯಂತ್ರವನ್ನು ಕಂಡುಹಿಡಿದವನು ಆ ಯಂತ್ರಕ್ಕೆ ಸಂಬಂಧಿಸಿದ ಪೂರ್ತಿ ವಿಷಯವನ್ನೆಲ್ಲಾ ಒಂದು ಸಮಾಚಾರವಾಗಿ ಮಾನ್ಯುವಲಾಗಿ ತಯಾರು ಮಾಡಿಕೊಡುವನು. ನಂತರ ಎಷ್ಟುಜನ ಯಾಂತ್ರಿಕರು ಬಂದರೂ ಮಾನ್ಯುವಲ್ ಪ್ರಕಾರವೆ ಯಂತ್ರವನ್ನು ನಡೆಸುವರು. ಹಾಗೆ ಮೊದಲು ಮಂತ್ರ ತಯಾರಾದ ನಂತರ ಎಷ್ಟು ಜನ ಮಾಂತ್ರಿಕರು ಬಂದರೂ ಮೊದಲು ತಯಾರು ಮಾಡಿದವನು ಹೇಳಿದ ನಿಯಮ ನಿಬಂಧನೆಗಳ ಪ್ರಕಾರವೆ ಆ ಮಂತ್ರವನ್ನು ಸಿದ್ಧಿಮಾಡಿ ಕೊಳ್ಳುವುದಾಗಲಿ, ಉಪಯೋಗಿಸುವುದಾಗಲಿ ನಡೆಯುತ್ತದೆ. ಮೊದಲು ಮಂತ್ರವನ್ನು ತಯಾರು ಮಾಡಿದವನು ಆ ಮಂತ್ರದಲ್ಲಿ ಜೋಡಿಸಿದ ಶಬ್ದಗಳ ಸಂಖ್ಯೆಯನ್ನನುಸರಿಸಿ, ನಂತರ ಆ ಮಂತ್ರ ಯಾವುದಕ್ಕಾಗಿ ತಯಾರಿ ಸಲಾಗಿರುತ್ತದೊ ಆ ಕೆಲಸದ ಸಾಂಧ್ರತೆಯನ್ನನುಸರಿಸಿ, ಆ ಮಂತ್ರಕ್ಕೆ ಬೇಕಾಗಿರುವ ಶಕ್ತಿಯನ್ನನುಸರಿಸಿ, ಮಂತ್ರವನ್ನು ಎಷ್ಟುಬಾರಿ ಏಕದಾಟಿಯಾಗಿ ಜಪಿಸಿದರೆ ಸರಿಹೋಗುತ್ತದೋ ಲೆಕ್ಕಿಸಿ, ಆ ಮಂತ್ರವನ್ನು ಉಪಯೋಗಿಸುವ ಮಾಂತ್ರಿಕರು ಆಚರಿಸಬೇಕಾದ ನಿಯಮ ನಿಬಂಧನೆಗಳೆಲ್ಲಾ ಹೇಳುವರು. ಉದಾಹರಣೆಗೆ ಒಂದು ಮಂತ್ರವನ್ನು ಸಿದ್ಧಿಮಾಡಿಕೊಳ್ಳುವುದಕ್ಕೆ ಅಮಾವಾಸ್ಯೆ ಹೋದ ನಂತರ ಬರುವ ಬುಧವಾರ, ಎಲೆಹಸಿರು ವಸ್ತ್ರವನ್ನು ಧರಿಸಿ, ಉತ್ತರ ಮುಖವಾಗಿ ಕುಳಿತುಕೊಂಡು, ಪೂಜಾದ್ರವ್ಯಗಳಾದ ತೆಂಗಿನಕಾಯಿ, ಅರಿಶಿಣ, ಕುಂಕುಮಗ ಳೊಂದಿಗೆ ಕಳಶವನ್ನು ಏರ್ಪಡಿಸಿಕೊಂಡು, ಆ ಕಳಶಕ್ಕೆ ವಿಳ್ಯದೆಲೆಗಳು ಅಲ್ಲದೆ, ಮುದಕದ ಎಲೆಗಳನ್ನಿರಿಸಿ ಮಂತ್ರವನ್ನು ಏಕದಾಟಿಯಲ್ಲಿ ಹತ್ತುಸಾವಿರ ಬಾರಿ ಜಪಿಸಿದರೆ ಆ ಮಂತ್ರ ಸಿದ್ಧಿ ಆಗುತ್ತದೆ. ನಂತರ ಆ ಮಂತ್ರವು ಯಾವ ಕೆಲಸಕ್ಕೆ ತಯಾರು ಮಾಡಲಾಗಿದೆಯೋ ಆ ಕೆಲಸದ ಅಗತ್ಯ ಬಂದಾಗ ಮಂತ್ರವನ್ನು ಹನ್ನೊಂದುಬಾರಿ ಜಪಿಸಿದರೆ ಆ ಕೆಲಸ ನೆರವೇರುತ್ತದೆ. ಅದರ ಪ್ರಕಾರ ಮಾಡಿದಾಗ ಆ ಮಂತ್ರವು ಸಿದ್ಧಿಯಾಗುತ್ತದೆ. ಯಾರಾದರೂ ಮಂತ್ರಕ್ಕಿರುವ ನಿಯಮಗಳ ಪ್ರಕಾರ ಮಾಡುವನೋ ಅವನಿಗೆ ಆ ಮಂತ್ರ ವಶವಾಗಿ ಹೋಗುವುದು. ಅದನ್ನೆ ಸಿದ್ಧಿ ಅನ್ನುವರು. ಸಿದ್ಧಿ ಹೊಂದಿದ ನಂತರ ಆ

ಮಂತ್ರಕ್ಕಾಗಿ ಕೆಲವು ನಿಬಂಧನೆಗಳನ್ನು ಆಚರಿಸಬೇಕಾಗಿರುತ್ತದೆ. ಅಮಾವಾಸ್ಯೆ ದಿನ ಕನ್ನಡಿಯಲ್ಲಿ ನೋಡಿಕೊಳ್ಳಬಾರದು. ಅನ್ನ ತಿನ್ನುವಾಗ ರುಚಿಯಾಗಿದೆಯಾ ಎಂದು ಯಾರಾದರು ಕೇಳಿದರೆ ಅಲ್ಲಿ ರುಚಿ ಎಂಬ ಪದ ಕೇಳಿಸುವುದರಿಂದ ಅನ್ನವನ್ನು ಬಿಡಬೇಕು. ಹಾಗೆ ಬಿಡದೆ ತಿಂದರೆ ಮಂತ್ರ ಬಲ ಆತನಿಂದ ಬಿಟ್ಟುಹೋಗುವುದು. ಹಾಗೆ ಅಮಾವಾಸ್ಯೆ ದಿನ ಕನ್ನಡಿಯಲ್ಲಿ ತನ್ನ ಆಕಾರವನ್ನು ನೋಡಿಕೊಂಡರೂ ಆ ಮಂತ್ರದ ಶಕ್ತಿ ಹೋಗುವದು. ಇಂತಹ ನಿಯಮ ನಿಬಂಧನೆಗಳು ಒಂದೊಂದು ಮಂತ್ರಕ್ಕೆ ಒಂದೊಂದು ವಿಧವಾಗಿ ಇರುವುದು. ಒಂದುಬಾರಿ ಸಿದ್ಧಿಹೊಂದಿದ ನಂತರ ನಿಯಮ ನಿಬಂಧನೆಗಳನ್ನು ಸಕ್ರಮವಾಗಿ ಆಚರಿಸಿದರೆ, ಎಷ್ಟುಕಾಲವಾದರೂ ಮಾಂತ್ರಿಕನಲ್ಲಿ ಮಂತ್ರಬಲ ಇರುತ್ತದೆ. ಯಾವಾಗಾದರೆ ನಿಯಮಗಳನ್ನು ಪಾಲಿಸದೆಹೋದರೆ ಮಂತ್ರಬಲ ಹೋಗುತ್ತದೆ. ಹೋದ ಮಂತ್ರಬಲವನ್ನು ಪುನಃ ಹೊಂದಬೇಕೆಂದರೆ ಮೊದಲಹಾಗೆ ಆ ಮಂತ್ರವನ್ನು ಪದ್ಧತಿ ಪ್ರಕಾರ ಜಪಿಸಿ ಸಿದ್ಧಿ ಹೊಂದಬೇಕಾಗುತ್ತದೆ.

ಒಂದು ಬಾರಿ ಪೂಜೆಯಲ್ಲಿ ಕುಳಿತುಕೊಂಡು ಮೇಲೇಳದೆ, ಮಂತ್ರಜಪ ವನ್ನು ನಿಲ್ಲಿಸದೆ, ಎಷ್ಟುಸಂಖ್ಯೆ ಜಪಿಸಬೇಕಾಗಿರುತ್ತದೊ ಅಷ್ಟು ಸಂಖ್ಯೆಯನ್ನು ಜಪಿಸಿದರೆ, ಮಂತ್ರ ಸಿದ್ಧಿಸುತ್ತದೆ, ಸಿದ್ಧಿಸಿದ ಮಂತ್ರದ ಬಲ ಸಿದ್ಧಿಹೊಂದಿದವನ ಶರೀರದಲ್ಲಿ ನಿಂತುಹೋಗುತ್ತದೆ. ಹಾಗೆ ನಿಂತುಹೋದ ಮಂತ್ರಬಲ ಆ ಮಂತ್ರವನ್ನು ಕೆಲವು ಬಾರಿ ಪಠಿಸಿದರೆ ಆಗ ಮಂತ್ರಬಲ ಮಾಂತ್ರಿಕನ ಸಂಕಲ್ಪದ ಪ್ರಕಾರ ಉಪಯೋಗಪಡುತ್ತದೆ. ಕೆಲವರು ಮಾಂತ್ರಿಕರು ಒಂದು ಮಂತ್ರವನ್ನು ಸಿದ್ಧಿ ಹೊಂದಿದ ನಂತರ ಸ್ವಲ್ಪ ಕಾಲಕ್ಕೆ ಆ ಸಿದ್ಧಿಯನ್ನು ಕಳೆದುಕೊಳ್ಳುವುದು ಸಹ ನಡೆಯುತ್ತಿರುತ್ತದೆ. ಅಂತವರು ಎರಡನೆ ಬಾರಿ ಪ್ರಯತ್ನಿಸಿ ಸಿದ್ಧಿ ಹೊಂದುವುದು ಸಹ ನಡೆಯುತ್ತಿರುತ್ತದೆ. ಪೂರ್ವಿಕರು ಮಂತ್ರಗಳ ವಿಧಾನವನ್ನು ತಿಳಿದವರು ಮನುಷ್ಯರಿಗಾಗಿ ಮಂತ್ರಗಳನ್ನು ತಯಾರುಮಾಡಿ ಕೊಟ್ಟಿದ್ದಾರೆ. ಮಂತ್ರಗಳನ್ನು ಸೃಷ್ಟಿಸುವ ಸಾಮರ್ಥ್ಯ ಇರುವವರು ಮಂತ್ರಗಳನ್ನು ಸಿದ್ಧಿಹೊಂದುವುದಿಲ್ಲ. ಅವುಗಳನ್ನು ಬಳಸಿಕೊಳ್ಳಬೇಕೆಂದು ಅಂದುಕೊಳ್ಳುವುದಿಲ್ಲ.

ಮಂತ್ರಗಳನ್ನು ತಯಾರು ಮಾಡುವ ಸಾಮರ್ಥ್ಯ ಇರುವವನು ಮಂತ್ರಬಲವನ್ನು ಕೋರಿಕೊಳ್ಳದೆ, ಆತ್ಮಬಲವನ್ನು ಕಲಿತು ತಾಂತ್ರಿಕನಾಗಲು ಪ್ರಯತ್ನಿಸುವನು, ಆತ್ಮಜ್ಞಾನ ತಿಳಿದವರು ಕೆಲವರು ಮಾತ್ರ ಮಂತ್ರವನ್ನು ತಯಾರುಮಾಡಿ, ಅವುಗಳಿಗಿರಬೇಕಾದ ನಿಯಮ ನಿಬಂಧನೆಗಳನ್ನು ಏರ್ಪಡಿಸುವರು. ಆತ್ಮಬಲ (ದೈವಬಲ) ಇಲ್ಲದವನು ಯಾರಾದರೂ ಮಂತ್ರವನ್ನು ತಯಾರು ಮಾಡಲಾರನು.

ಮಂತ್ರವೆಂದರೆ ಏನೋ, ಅದು ಹೇಗೆ ಇರಬೇಕೊ, ಅದಕ್ಕೆಷ್ಟು ಶಕ್ತಿ ಇರುತ್ತದೋ ದೈವಬಲವಿರುವವನಿಗೆ ಚೆನ್ನಾಗಿ ತಿಳಿಯುತ್ತದೆ. ದೈವಬಲ (ಆತ್ಮಬಲ) ಇರುವವನು ಮಂತ್ರಬಲವನ್ನು ತಯಾರು ಮಾಡಬಲ್ಲನು. ಹಾಗಲ್ಲದೆ ಮಂತ್ರಗಾರನು ಮಂತ್ರವನ್ನು ತಯಾರುಮಾಡಲಾರನು. ತಯಾರು ಮಾಡಿದ ಮಂತ್ರದಿಂದ ಲಾಭ ಹೊಂದುವವನು ಮಂತ್ರಗಾರ. ಮಂತ್ರವನ್ನು ಶಾಸಿಸುವುದು ಆತ್ಮಜ್ಞಾನ. ಆದ್ದರಿಂದ ಆತ್ಮಜ್ಞಾನ ಇರುವವನು ಮಾತ್ರ ಮಂತ್ರವನ್ನು ಶಾಸಿಸಿ ತಯಾರುಮಾಡುತ್ತಾನೆ. ಆತ್ಮಜ್ಞಾನಿಗಳಿಂದ ತಯಾರು ಮಾಡಿದ ಮಂತ್ರಶಕ್ತಿ ಆತ್ಮಜ್ಞಾನಕ್ಕೆ ಒಳಪಟ್ಟಿರುತ್ತದೆಂದು ಹೊರಗೆ ತಿಳಿಯುವುದಕ್ಕೆ ಆತ್ಮಜ್ಞಾನಿಗಳು ಮಂತ್ರಗಳನ್ನು ತಯಾರು ಮಾಡುವುದು ನಡೆದಿದೆ. ಮಂತ್ರಶಕ್ತಿ ಆತ್ಮಶಕ್ತಿಯಿಂದ ತಯಾರಾಗಿದೆ. ಆದ್ದರಿಂದ ಯಾವ ಮಂತ್ರಶಕ್ತಿಗಳು ಸಹ ದೈವಜ್ಞಾನ ಇರುವ ವರನ್ನು ಏನೂ ಮಾಡಲಾರವು. ಆತ್ಮಜ್ಞಾನ ಇರುವವರನ್ನು ನೋಡಿದರೆ ಮಂತ್ರಶಕ್ತಿಗಳು ಭಯಪಡುತ್ತವೆ. ಆದ್ದರಿಂದ ಯಾವ ಮಂತ್ರ ಪ್ರಯೋಗವು ತಮ್ಮ ಪ್ರಭಾವವನ್ನು ಜ್ಞಾನಿಗಳ ಮೇಲೆ ತೋರಿಸುವುದಿಲ್ಲ.

ಮಂತ್ರಶಕ್ತಿಗೂ ಯಂತ್ರಶಕ್ತಿಗೂ ಎಷ್ಟೋ ವ್ಯತ್ಯಾಸವಿದೆ. ಯಂತ್ರಶಕ್ತಿ ಜೀವವಿಲ್ಲದಿರುವುದು, ಮಂತ್ರಶಕ್ತಿ ಜೀವವಿರುವಂತದ್ದು. ಮಂತ್ರಶಕ್ತಿಗೆ ಜೀವವಿದೆ ಯೆನ್ನುವ ಮಾತು ಕೆಲವರಿಗೆ ಆಶ್ಚರ್ಯವಾಗಿದ್ದರೂ ಅದು ಪೂರ್ತಿಸತ್ಯ. ಕಲ್ಲಿನಿಂದ ತಯಾರು ಮಾಡಿದ ಪ್ರತಿಮೆಯಲ್ಲಿಯೂ ಸಹ ಜೀವ ಸೇರುತ್ತದೆ. ಹಾಗೆ ಮಂತ್ರ ಸಿದ್ಧಿಸಿದಾಗ, ಸಹ ಅದಕ್ಕೆ ಜೀವ ಬರುತ್ತದೆ. ಕಲ್ಲಿನಿಂದ ತಯಾರಾದ

ಪ್ರತಿಮೆ ಪ್ರತಿಷ್ಠಿಸುವ ಸಮಯದಲ್ಲಿ ಅದರೊಳಗೆ ಜೀವ ಸೇರಿದಹಾಗೆ, ತಯಾರಾದ ಮಂತ್ರ ಸಿದ್ಧಿಯಾಗುವಾಗ ಅದಕ್ಕೆ ಜೀವ ಬರುತ್ತದೆ. ಆಗ ಮಂತ್ರ ಶಕ್ತಿವಂತವಾಗುತ್ತದೆ. ಒಂದು ಮಂತ್ರದಲ್ಲಿ ಎಷ್ಟು ಬಲವಿರುವ ಜೀವಿಯು ಸೇರಬೇಕೊ, ಆ ಮಂತ್ರದಲ್ಲಿರುವ ಶಬ್ಧವನ್ನು ಅನುಸರಿಸಿ ಮತ್ತು ಆ ಮಂತ್ರವನ್ನು ಉಚ್ಛಾರಣೆ ಮಾಡುವ ಸಂಖ್ಯೆಯನ್ನು ಅನುಸರಿಸಿರುವುದು. ಒಂದು ಮಂತ್ರವನ್ನು ಸಿದ್ಧಿ ಮಾಡಿದ ದಿನದಂದು ಅದು ಜೀವ ಹೊಂದುತ್ತದೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಅದೇ ಮಂತ್ರವನ್ನು ಎಷ್ಟುಜನ ಸಿದ್ಧಿ ಮಾಡಿಕೊಂಡರೂ, ಆ ಮಂತ್ರವು ಬೇರೆ ಬೇರೆ ಜೀವಗಳನ್ನು ಹೊಂದಿ ಬೇರೆ ಬೇರೆ ಶಕ್ತಿಗಳಾಗಿ ಅವರಲ್ಲಿದ್ದು ಹೋಗುವುದು. ಒಂದು ಮಂತ್ರವನ್ನು ಒಬ್ಬ ಮಾಂತ್ರಿಕನು ಸಿದ್ಧಿ ಮಾಡಿಕೊಂಡಾಗ ಆತನಿಗೆ ಆ ಮಂತ್ರಶಕ್ತಿ ಅದರ ನಿಯಮಗಳ ಪ್ರಕಾರ ಹೇಗೆ ಉಪಯೋಗ ಪಡುತ್ತಿದೆಯೊ, ಹಾಗೆಯೇ ಆ ಮಂತ್ರವನ್ನು ಎಷ್ಟು ಜನ ಸಿದ್ಧಿ ಹೊಂದಿದರೂ ಎಲ್ಲರಿಗೂ ಒಂದೇ ವಿಧದಲ್ಲಿ ಉಪಯೋಗಪಡುತ್ತದೆ. ಉದಾಹರಣೆಗೆ ಹಾವಿನ ವಿಷವನ್ನು ತೊಲಗಿಸುವ ಮಂತ್ರವನ್ನು ಒಬ್ಬನು ಸಿದ್ಧಿಹೊಂದಿ ಅದರಿಂದ ಹಾವಿನಕಡಿತಕ್ಕೆ ಗುರಿಯಾದವರನ್ನು ತನ್ನ ಮಂತ್ರದಿಂದ ಕಾಪಾಡುತ್ತಿರುವನು. ಮೊದಲು ಹಾವಿನ ವಿಷವನ್ನು ಚೇದಿಸುವ ಮಂತ್ರವನ್ನು ಹೊಂದಿದ ವ್ಯಕ್ತಿ ಅದೇ ಮಂತ್ರವನ್ನು ಹತ್ತುಜನಕ್ಕೆ ಅದರ ನಿಯಮ ನಿಬಂಧನೆಯೊಂದಿಗೆ ಸಹ ಹೇಳಿದ್ದಾನೆಂದುಕೊಳ್ಳೋಣ. ಆಗ ಆ ಹತ್ತುಜನ ಆ ಮಂತ್ರದ ನಿಯಮಗಳ ಪ್ರಕಾರ ಅದನ್ನು ಸಿದ್ಧಿಮಾಡಿಕೊಂಡು ಅವರೂ ಸಹ ಹಾವು ಕಚ್ಚಿರುವುದಕ್ಕೆ ವೈದ್ಯವನ್ನು ಮಾಡಬಹುದು. ಒಂದೇ ಮಂತ್ರವನ್ನು ಎಷ್ಟು ಜನರಾದರು ಸಾಧಿಸಿಕೊಳ್ಳಬಹುದು. ಎಷ್ಟುಜನ ಸಿದ್ಧಿ ಹೊಂದಿದರೆ ಅಷ್ಟು ಸಜೀವ ಮಂತ್ರ ಶಕ್ತಿಗಳಾಗಿ ಒಂದೇ ಶಬ್ಧವಿರುವ ಮಂತ್ರ ತಯಾರಾಗುತ್ತದೆ, ಎಲ್ಲರಿಗೂ ಉಪಯೋಗಪಡುತ್ತದೆ.

ಖಗೋಳದಲ್ಲಿ ಕೋಟ್ಯಾನುಕೋಟಿ ಜೀವರಾಶಿಗಳು ಗ್ರಹಗಳ ರೂಪಗ ಳಲ್ಲಿ, ಉಪಗ್ರಹಗಳ ರೂಪದಲ್ಲಿ, ಭೂತಗಳು, ಉಪಭೂತಗಳ ರೂಪದಲ್ಲಿ

ಇವೆಯೆಂದು ಹೇಳಿಕೊಂಡಿದ್ದೇವೆ. ಅವುಗಳಲ್ಲಿ ಕೆಲವುಗಳಿಗೆ ಸ್ಥೂಲ ಆಕಾರಗಳಿದ್ದು, ಕೆಲವು ಸೂಕ್ಷ್ಮಾಕಾರದಿಂದ ಇವೆ. ಸೂಕ್ಷ್ಮಾಕಾರಗಳಲ್ಲಿರುವ ದೊಡ್ಡ ಗ್ರಹಗಳಾಗಲಿ, ಉಪಗ್ರಹಗಳಾಗಲಿ ಭೂಮಿಮೇಲೆ ತಯಾರು ಮಾಡಿದ ಮಂತ್ರಬಲಕ್ಕೆ ಸಮಾನವಾದ ಬಲವಿರುವವು ಇರುತ್ತವೆ. ಒಂದು ಮಂತ್ರ ತಯಾರಾಗಿ ಅದು ಮನುಷ್ಯನಿಂದ ಸಿದ್ಧಿಹೊಂದಿದಾಗ ಆ ಮಂತ್ರಕ್ಕೆ ಸರಿಹೋಗುವ ಸಾಮರ್ಥ್ಯವಿರುವ ಜೀವವಿರುವ ಗ್ರಹವಾಗಲಿ, ಉಪಗ್ರಹವಾಗಲಿ ಮಂತ್ರ ಉಚ್ಛಾರಣೆ ನಡೆದ ಸ್ಥಳಕ್ಕೆ ಆಕರ್ಷಿಸಲ್ಪಡುತ್ತದೆ. ಆಗ ಅಲ್ಲಿಗೆ ಬಂದ ಗ್ರಹ ಮಂತ್ರಶಕ್ತಿಯಾಗಿ ಮಾಂತ್ರಿಕನಲ್ಲಿ ಸೇರಿಹೋಗುವುದು. ಈ ವಿಧದಲ್ಲಿ ಒಂದು ಮಂತ್ರಕ್ಕೆ ತಕ್ಕ ಗ್ರಹಶಕ್ತಿ ಜೊತೆಯಾಗಿ ಅದು ಮಂತ್ರಶಕ್ತಿಯಾಗಿ ಮಂತ್ರಗಾರನಲ್ಲಿ ನಿಂತುಹೋಗುತ್ತದೆ. ಈ ವಿಧದಲ್ಲಿ ಅನೇಕ ವಿಧಗಳ ಮಂತ್ರಗಳಿಗೆ ಮಂತ್ರಸಿದ್ಧಿ ಸಮಯದಲ್ಲಿ ಜೀವವಿರುವ ಗ್ರಹಶಕ್ತಿಗಳು ಜೊತೆಯಾಗಿ ಆಯಾ ಮಂತ್ರಶಕ್ತಿಗಳಾಗಿ ಕರೆಯಲ್ಪಡುತ್ತವೆ. ಹಾಗೆ ಬಂದ ಸೂಕ್ಷ್ಮವಾದ ಮಂತ್ರಶಕ್ತಿಗಳು ಮನುಷ್ಯನ ಬಲಕ್ಕಿಂತ ಎಷ್ಟೋ ಪಟ್ಟು ದೊಡ್ಡವಾಗಿದ್ದು, ಮಂತ್ರಸಿದ್ಧಿ ಹೊಂದಿದ ವ್ಯಕ್ತಿಯ ಆಧೀನದಲ್ಲಿಯೇ ಇದ್ದು, ಸಮಯಬಂದಾಗ ಮಾಂತ್ರಿಕನು ನೆನಪಿಸಿಕೊಂಡಾಗ ಆತನ ಸಂಕಲ್ಪವನ್ನು ಅನುಸರಿಸಿ ಕೆಲಸ ಮಾಡುವವು.

ಪ್ರತಿ ಮಂತ್ರಕ್ಕು ಸಿದ್ಧಿಗಾಗಿ ಕೆಲವು ನಿಯಮಗಳಿರುತ್ತವೆ, ಮಂತ್ರ ಸಿದ್ಧಿಸಿದ ನಂತರ ಕೆಲವು ನಿಯಮಗಳಿರುತ್ತವೆ. ಸಿದ್ಧಿಗಾಗಿ ನಿಯಮದ ಪ್ರಕಾರ ಆಚರಿಸಿ ಮಂತ್ರ ಸಿದ್ಧಿಹೊಂದಿದ ನಂತರ ವಶವಾದ ಗ್ರಹ ಮಾಂತ್ರಿಕನ ಅಧೀನದಲ್ಲಿ ಇದ್ದು ಕೆಲಸ ಮಾಡುವುದಕ್ಕೆ ಕೆಲವು ನಿಯಮಗಳಿರುತ್ತವೆ. ಆದ್ದರಿಂದ ಪ್ರತಿ ಮಂತ್ರಕ್ಕೂ ಸಿದ್ಧಿಗಿಂತ ಮೊದಲು, ಸಿದ್ಧಿನಂತರ ಎರಡು ವಿಧಗಳ ನಿಮಯಗಳಿರು ವುದು ಸಹಜವೇ. ಮೊದಲ ನಿಯಮಗಳ ಪ್ರಕಾರ ಆಚರಿಸದೆ ಹೋದರೆ ಮಂತ್ರ ಸಿದ್ಧಿಯಾಗುವುದಿಲ್ಲ, ಅದಕ್ಕೆ ಶಕ್ತಿ ಬರುವುದಿಲ್ಲ. ಒಂದುವೇಳೆ ಮೊದಲ ನಿಯಮಗಳನ್ನು ಖಚಿತವಾಗಿ ಆಚರಿಸಿ ಮಂತ್ರಸಿದ್ಧಿ ಹೊಂದಿದರೂ, ಎರಡನೇ ನಿಯಮಗಳ ಪ್ರಕಾರ ಇರದೆ ಹೋದರೆ ವಶವಾದ ಮಂತ್ರಶಕ್ತಿ ಮಾಂತ್ರಿಕನ

ಆಧೀನದಿಂದ ಬಿಟ್ಟುಹೋಗುವುದು. ಆದ್ದರಿಂದ ಒಬ್ಬ ಮಾಂತ್ರಿಕನು ಎಷ್ಟೋ ಶುಚಿ ಶುಭ್ರತೆಯಿದ್ದು, ಮಂತ್ರದ ನಿಯಮಗಳನ್ನು ಆಚರಿಸಿದಾಗಲೆ, ಯಾವ ಮಂತ್ರವಾದರೂ ಮನಷ್ಯನ ಆಧೀನದಲ್ಲಿ ಇರುವುದು. ಕೆಲವು ಮಂತ್ರಗಳಿಗೆ ವಶವಾಗುವ ಗ್ರಹಶಕ್ತಿಗಳು ಕಠಿಣವಾಗಿರುತ್ತವೆ, ಕೆಲವು ಮಾತ್ರ ಸೌಮ್ಯವಾಗಿ ಇರುವವು. ಆದ್ದರಿಂದ ಮಂತ್ರಗಳನ್ನು ಸಹ ಎರಡು ವಿಧಗಳಾಗಿ ವಿಭಜಿಸಿ ಕ್ಷುದ್ರ ಮಂತ್ರಗಳೆಂದು, ಸೌಮ್ಯಮಂತ್ರಗಳೆಂದು ಹೇಳಿದ್ದಾರೆ. ಕಠಿಣವಾದ ವ್ಯವಹಾರವಿರುವ ಗ್ರಹಗಳು ಮಂತ್ರಸಿದ್ಧಿ ಸಮಯಗಳಲ್ಲಿ ಮನುಷ್ಯನಿಗೆ ವಶವಾದರೂ ಆತನಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಕಾದುಕೊಂಡಿರುತ್ತವೆ. ಯಾವಾಗಾದರೆ ಮಾಂತ್ರಿಕನು ನಿಯಮಗಳನ್ನು ಪಾಲಿಸುವುದಿಲ್ಲವೋ ಆಗ ಆ ನೆಪದಿಂದ ಗ್ರಹಶಕ್ತಿಗಳು ಆತನಿಂದ ಹೊರಟುಹೋಗುತ್ತವೆ. ಹಾಗೆ ಹೊರಟು ಹೋಗುವಾಗ ಆ ಮಾಂತ್ರಿಕನು ಪುನಃ ಮಂತ್ರಸಿದ್ಧಿ ಹೊಂದಿ ತಮ್ಮನ್ನು ವಶಪಡಿಸಿಕೊಳ್ಳದಹಾಗೆ ಆತನ ಶರೀರದಲ್ಲಿ ಅವಯವಲೋಪವೇರ್ಪಡಿಸಿಯಾ ಗಲಿ, ಅಥವಾ ಆತನನ್ನು ಪೂರ್ತಿ ಸಾಯಿಸಿಯಾಗಲಿ ಹೋಗುವರು. ಇಂತಹ ಗ್ರಹಶಕ್ತಿಗಳಿಂದ ಬಹಳ ಜನ ಮಾಂತ್ರಿಕರು ತಮ್ಮ ಅವಯವಗಳನ್ನು ಕಳೆದುಕೊಂಡು ಕುಂಟ, ಕುರುಡರಾಗಿ ಬದಲಾಗಿ, ಅಥವಾ ಪ್ರಾಣಗಳನ್ನು ಕಳೆದುಕೊಳ್ಳುವುದು ನಡೆದಿದೆ.

ಕೆಲವು ಮಂತ್ರಗಳನ್ನು ಮೊದಲು ಸಿದ್ಧಿ ಹೊಂದುವುದಕ್ಕೆ ಮಾಡುವ ಪ್ರಯತ್ನದಲ್ಲಿಯೆ ನಿಯಮಗಳನ್ನು ಸರಿಯಾಗಿ ಪಾಲಿಸದೆ ಹೋದರೂ, ಮದ್ಯಪಾನವನ್ನು ಸೇವಿಸಿ ಮಂತ್ರಪಠನೆ ಮಾಡಿದರೂ, ಕೆಲವು ಗ್ರಹಶಕ್ತಿಗಳು ಆಗ್ರಹಹೊಂದಿ ಮಾಂತ್ರಿಕನನ್ನು ನೇರವಾಗಿ ಸಾಯಿಸಿದ ಸಂಘಟನೆಗಳು ಸಹ ಇವೆ. ಕ್ಷುದ್ರ ಮಂತ್ರಗಳನ್ನು ಸಿದ್ದಿಹೊಂದುವುದಕ್ಕೆ ಮಾಡುವ ಪ್ರಯತ್ನದಲ್ಲಿ ಕೆಲವರು ಮಾಂತ್ರಿಕರು ರಕ್ತವನ್ನು ಕಕ್ಕಿ ಸತ್ತುಹೋದವರು ಸಹ ಇದ್ದಾರೆ. ಕೆಲವರಾದರೆ ಕೋಮಾದೊಳಗೆ (ಅಪಸ್ಮಾರಕ ಸ್ಥಿತಿಯೊಳಗೆ) ಹೋಗಿ ನಂತರ ಹೊರಗಿನ ಜ್ಞಾಪಕದೊಳಗೆ ಬಾರದೆ ಎರಡು ಅಥವಾ ಮೂರು ದಿನಗಳಿಗೆ

ಸತ್ತುಹೋದವರೂ ಸಹ ಇದ್ದಾರೆ. ಇದೆಲ್ಲವು ನೋಡಿದ ನಂತರ ಮಂತ್ರ, ಮಂತ್ರಶಕ್ತಿ ಎಂದರೆ ಏನೋ ತಿಳಿಯದೆ ಹೀಯಾಳಿಸಿ ಮಾತನಾಡುವುದು ಒಳ್ಳೆಯದಲ್ಲವೆಂದು ಅರ್ಥವಾಗುತ್ತದೆ. ಕೆಲವರು ಓದಿಕೊಂಡವರು ವಿಜ್ಞಾನ ಶಾಸ್ತ್ರವನ್ನು ಸ್ವಲ್ಪ ತಿಳಿದವರಾಗಿ, ಮಂತ್ರ ಅದಕ್ಕೆ ಮಹಿಮೆ ಎಂಬ ಮಾತು ಅಸತ್ಯವೆಂದು, ಮಂತ್ರವನ್ನು ಯಾರಾದರೂ ನಿರೂಪಿಸುತ್ತೀರಾ? ಎಂದು ಪ್ರಶ್ನಿಸುತ್ತಾರೆ. ಆದರೆ ವಿಜ್ಞಾನಕ್ಕೆ ಸಿಗದ ಎಷ್ಟೋ ವಿಷಯಗಳು ಭೂಮಿಮೇಲೆ ಇವೆಯೆಂದು ಅವರಿಗೆ ತಿಳಿದಿಲ್ಲ.

ಪೂರ್ವಕಾಲ ಕಲಿಯುಗಕ್ಕಿಂತ ಮೊದಲು ದ್ವಾಪರಯುಗದ ಕೊನೆಯ ವರೆಗೂ ಮಂತ್ರಗಳಿಗೆ ಹೆಚ್ಚಿನ ಆದ್ಯತೆ ಇರುತ್ತಿತ್ತು. ಆ ಕಾಲದಲ್ಲಿ ಮನುಷ್ಯ ಕಲಿತುಕೊಂಡ ವಿದ್ಯೆಗಳಲ್ಲಿ ಮಂತ್ರ ವಿದ್ಯೆ ಬಹಳ ಮುಖ್ಯವಾದದ್ದು. ಆದ್ದರಿಂದ ಆಗಿನ ಕಾಲದಲ್ಲಿ ಮಂತ್ರವೆಂದರೆ ಏನೋ, ಮಂತ್ರಶಕ್ತಿ ಎಂದರೆ ಏನೋ ತಿಳಿಯದವರು ಇಲ್ಲವೇ ಇಲ್ಲ. ಆ ಕಾಲದಲ್ಲಿ ಯಂತ್ರಬಲವಿಲ್ಲ, ಎಲ್ಲಾ ಮಂತ್ರ ಬಲವೇ ಇರುತ್ತಿತ್ತು. ಈಗಿನ ಕಾಲದಲ್ಲಿ ವೇಗವಾಗಿ ಆಕಾಶದಲ್ಲಿ ಪ್ರಯಾಣಿಸುವ ವಿಮಾನವು ಯಂತ್ರವಾಗಿದ್ದರೆ, ತ್ರೇತಾಯುಗದಲ್ಲಿ ರಾವಣಬ್ರಹ್ಮ ಉಪಯೋಗಿಸಿದ ವಿಮಾನ ಮಂತ್ರಬಲದಿಂದಲೇ ಈಗಿನ ವಿಮಾನಕ್ಕಿಂತಲೂ ವೇಗವಾಗಿ ಹೋಗುತ್ತಿತ್ತೆಂದು ಯಾರಿಗು ತಿಳಿಯದು. ಕಾಲ ಕಳೆಯುತ್ತಾ ಮಂತ್ರಬಲ ಹೋಗಿ ಯಂತ್ರಬಲ ಅಭಿವೃದ್ಧಿಯಾಗಿರುವುದರಿಂದ, ಈಗಿನ ಕಾಲದಲ್ಲಿ ಯಂತ್ರಗಳು ಹೊರತು ಮಂತ್ರಗಳು ತಿಳಿಯದೆ ಹೋಗಿವೆ. ತಿಳಿಯದೆ ಹೋಗಿರುವುದಲ್ಲದೆ ಮಂತ್ರವೆನ್ನುವುದೇ ಅಸತ್ಯವೆಂದು ಮನುಷ್ಯ ಅನ್ನುತ್ತಿದ್ದಾನೆ. ಕಳೆದುಹೋದ ಯುಗಗಳ ಕಾಲದಲ್ಲಿ ಮಂತ್ರಗಳಿಂದ ನಡೆದ ಕೆಲಸಗಳಿಗೆ ವಿವರಣೆ ತಿಳಿಯದ ಮನುಷ್ಯ ತನಗೆ ತಿಳಿದಿರುವುದೇ ವಿಜ್ಞಾನವೆಂದುಕೊಳ್ಳುವುದು ತಪ್ಪು ಅಲ್ಲವೆ!

ಈ ದಿನ ಯಂತ್ರಶಕ್ತಿಯನ್ನು ಅಶ್ವಶಕ್ತಿಯಾಗಿ (ಹಾರ್ಸ್‌ಪವರಾಗಿ) ಲೆಕ್ಕಿಸುತ್ತಿದ್ದೇವೆ. ಆ ದಿನ ಮಂತ್ರಶಕ್ತಿಯನ್ನು ಅಸ್ತ್ರಶಕ್ತಿಯಾಗಿ ಲೆಕ್ಕಿಸುತ್ತಿದ್ದರು.

ಸ್ಥೂಲವಾಗಿ ಕಾಣಿಸುವ ಯಂತ್ರವೊಂದರ ಶಕ್ತಿಯನ್ನು ಅಶ್ವಶಕ್ತಿಯಾಗಿ ಹೇಳಿಕೊಳ್ಳುವ ನಾವು, ಸೂಕ್ಷ್ಮವಾಗಿರುವ ಮಂತ್ರ ಶಕ್ತಿಯನ್ನು ಅಸ್ತ್ರಶಕ್ತಿಯಾಗಿ ನಮ್ಮ ಹಿರಿಯರು ಹೇಗೆ ಹೇಳಿದ್ದಾರೋ ತಿಳಿಯದೆ ಹೋಗುವುದಲ್ಲದೆ, ಅವರಿಗಿಂತ ನಾವು ಬುದ್ಧಿವಂತರೆಂದುಕೊಳ್ಳುವುದು ತಪ್ಪಲ್ಲವೆ! ಸೂಕ್ಷ್ಮಭಾವಗಳನ್ನು ಬುದ್ಧಿ ಯೋಚಿಸುತ್ತದೆಂದು, ಸ್ಥೂಲಭಾವಗಳನ್ನು ಬುದ್ಧಿ ಆಲೋಚಿಸುತ್ತದೆಂದು, ಆಲೋಚನೆಗಳಿಗೂ ಯೋಚನೆಗಳಿಗೂ ಎಷ್ಟೋ ವ್ಯತ್ಯಾಸವಿದೆಯೆಂದು ನಾವು ಪ್ರಾರಂಭದಲ್ಲಿಯೇ ಹೇಳಿಕೊಂಡಿದ್ದೇವೆ. ಈಗಿನ ಕಾಲದಲ್ಲಿನ ಮನುಷ್ಯರ ಬುದ್ಧಿ ಆಲೋಚನೆಗಳಿಗೆ ಪರಿಮಿತವಾಗಿ ಹೋಗಿದೆ. ಎಲ್ಲರಿಗೂ ಅರ್ಥವಾಗುವ ಹಾಗೆ ಹೇಳಬೇಕೆಂದರೆ ಆಲೋಚನೆಗಳು ಶರೀರದ ಹೊರಗಿನ ದೃಷ್ಠಿಯನ್ನು ಕಲ್ಪಿಸುತ್ತ ವೆಂದು, ಯೋಚನೆಗಳೆಂದರೆ ಶರೀರಾಂತರ್ಗತ ದೃಷ್ಠಿಯನ್ನು ಕಲ್ಪಿಸುತ್ತವೆಂದು ಹೇಳಬಹುದು. ಆದ್ದರಿಂದ ಶರೀರದ ಗೆರೆಯನ್ನು ದಾಟದೆ ಒಳಗಿನ ಯೋಚನೆಗಳ ದೃಷ್ಠಿ ಹೊಂದಿರುವ ಯೋಗಿಗಳು, ಜ್ಞಾನಿಗಳು ಮಂತ್ರಗಳನ್ನು ಅವುಗಳ ಶಕ್ತಿಯನ್ನು ಇಂದಿಗೂ ಗ್ರಹಿಸಬಲ್ಲರು.

ಇಲ್ಲಿಗೆ ಐದುಸಾವಿರದ ಮೂನ್ನೂರು (5300) ವರ್ಷಗಳ ಹಿಂದಕ್ಕೆ ಹೋದರೆ ದ್ವಾಪರಯುಗದ ಕೊನೆಯ ಕಾಲದಲ್ಲಿ ಕೌರವರಿಗು, ಪಾಂಡವರಿಗು ನಡೆದ ಭಾರತಯುದ್ಧದಲ್ಲಿ ಅಸ್ತ್ರಬಲ ಉಪಯೋಗ ಪಟ್ಟಹಾಗೆ ತಿಳಿಯುತ್ತದೆ. ಆ ಕಾಲದಲ್ಲಿ ಮಂತ್ರಬಲವಿರುವ ಎಷ್ಟೋ ಅಸ್ತ್ರಗಳು ಇರುತ್ತಿದ್ದವು. ಎಲ್ಲಾ ಅಸ್ತ್ರಗಳ ವಿವರಗಳು, ಹೆಸರುಗಳು ನಮಗೆ ತಿಳಿಯದಿದ್ದರೂ ಮುಖ್ಯವಾದ ಕೆಲವು ಹೆಸರುಗಳು ಮಾತ್ರ ತಿಳಿದಿದೆ. ನನಗೆ ತಿಳಿದವುಗಳಲ್ಲಿ ಒಂದು ಬ್ರಹ್ಮಾಸ್ತ್ರ ಎರಡನೆಯದು ನಾಗಾಸ್ತ್ರ, ಮೂರನೆಯದು ಪಾಸುಪತಾಸ್ತ್ರ, ನಾಲ್ಕು ಶಬ್ಧಬೇಧನಾಸ್ತ್ರ, ಐದನೆಯದು ವರುಣಾಸ್ತ್ರ, ಆರನೆಯದು ಅಗ್ನಿಅಸ್ತ್ರ ಮೊದಲಾದವುಗಳು ಇರುತ್ತಿದ್ದವು. ಇವೇ ಅಲ್ಲದೆ ಎಷ್ಟೋ ವಿಧಗಳ ಅಸ್ತ್ರಗಳು ಇರುತ್ತಿದ್ದವು. ಅಸ್ತ್ರಗಳೆಲ್ಲವು ಮಂತ್ರಬಲದಿಂದ ಕೂಡಿಕೊಂಡಿರುವವೆಂದು ಹೇಳಿಕೊಂಡಿದ್ದೇವೆ. ಆ ದಿನ ಅಸ್ತ್ರಗಳನ್ನು ಬುದ್ಧಿ ಬಲವಿರುವವರೆ ಸಾಧಿಸುತ್ತಿದ್ದರು.

ಅವುಗಳನ್ನು ಕುರಿತು ಬೋಧಿಸುವುದಕ್ಕೆ ಗುರುಗಳು ಸಹಾ ಇರುತ್ತಿದ್ದರು. ಭಾರತ ಯುದ್ಧದಲ್ಲಿ ಅಸ್ತ್ರಬಲ ಅಲ್ಲದೆ ತನ್ನ ಭುಜಬಲದಿಂದಲೇ ಧುರ್ಯೋಧನನು ಯುದ್ಧ ಮಾಡಿದಂತಿರುವಾಗ, ಅದೇ ಯುದ್ಧದಲ್ಲಿ ಕರ್ಣ, ಅರ್ಜುನ, ಭೀಷ್ಮ ಅಸ್ತ್ರಗಳ ಬಲವನ್ನುಪಯೋಗಿಸಿದ ಹಾಗೆ ತಿಳಿಯುತ್ತದೆ. ಒಂದು ಅಸ್ತ್ರ ಎಷ್ಟೋ ಬಲವನ್ನೊಂದಿ ಕೆಲವು ಸಾವಿರ ಜನರನ್ನು ಒಂದೇ ಬಾರಿ ಸಂಹರಿಸುತ್ತಿತ್ತು. ಆ ದಿನ ಯುದ್ಧಗಳಲ್ಲಿ ಸೈನ್ಯಬಲವನ್ನು ನೋಡಿ ಭಯಪಡುವವರಲ್ಲ. ಎದುರುಗಿರುವ ಶತ್ರುವಿನ ಹತ್ತಿರ ಅಸ್ತ್ರಗಳಿವೆಯೆಂದು ತಿಳಿದರೆ ಅವರೊಂದಿಗೆ ಯುದ್ಧ ಮಾಡುವು ದಕ್ಕೆ ಭಯಪಡುತ್ತಿದ್ದರು.

ಗತ ದ್ವಾಪರಯುಗದಲ್ಲಿ ಮಂತ್ರಬಲವಿರುವ ಅಸ್ತ್ರಗಳಿಂದ ಭಯಂಕರ ಯುದ್ಧ ನಡೆದಿದೆ. ಅಂತಹ ಮಂತ್ರಶಕ್ತಿಗಳನ್ನು ಹೊಂದಿದ ದೇಶ ಒಂದು ಭಾರತದೇಶ ಹೊರತುಪಡಿಸಿ ಯಾವ ದೇಶವಿಲ್ಲವೆಂದು ಹೇಳಬಹುದು. ಪ್ರಪಂಚದ ದೇಶಗಳೆಲ್ಲಾವುಗಳಿಗೂ ಭಾರತದೇಶ ದೊಡ್ಡ ಶಕ್ತಿಹೊಂದಿರುವ ದೇಶವೆಂದು ತಿಳಿದಿದೆ. ಇತರ ದೇಶಗಳಲ್ಲಿ ಮಂತ್ರಬಲವನ್ನು ಕುರಿತು ಸಂಪೂರ್ಣ ವಾಗಿ ತಿಳಿದ ಆತ್ಮಜ್ಞಾನಿಗಳು ಇಲ್ಲದೆ ಹೋಗಿರುವುದರಿಂದ ಅವರಿಗೆ ಅಸ್ತ್ರಗಳನ್ನು ಕುರಿತು ತಿಳಿಯದೆ ಹೋಗಿದೆ. ಭಾರತ ದೇಶದೊಂದಿಗೆ ಸಮಾನ ಬಲವನ್ನು ಹೊಂದುವುದಕ್ಕೆ ಇತರ ದೇಶದವರು ಯಂತ್ರ ಬಲವನ್ನು ಅಭಿವೃದ್ಧಿ ಮಾಡಿ ಕೊಂಡಿದ್ದಾರೆ. ಹಾಗೆ ಅವರು ಮಾಡಿದ ಪ್ರಯತ್ನ ಕಾರಣವಾಗಿ ಈದಿನ ಅಸ್ತ್ರಗಳ ಬದಲು ಅನೇಕ ವಿಧಗಳ ಬಾಂಬುಗಳು ತಯಾರಾಗಿವೆ. ದ್ವಾಪರಯುಗದ ನಂತರ ಭಾರತದೇಶದಲ್ಲಿಯೂ ಸಹ ಮಂತ್ರಬಲ ಕಡಿಮೆಯಾಗಿ ಹೋಗಿದೆ. ಈದಿನ ಭಾರತದೇಶ ತನ್ನ ಅಸ್ತ್ರಬಲವನ್ನು ಕಳೆದುಕೊಂಡು ಕೊನೆಗೆ ಯಂತ್ರ ಬಲವಾದ ಬಾಂಬುಗಳ ಬಲವನ್ನು ಬೆಳೆಸಿಕೊಂಡಿದೆ. ಒಂದು ಕಾಲದಲ್ಲಿ ಮಂತ್ರಶಕ್ತಿಗೆ ತವರು ಮನೆಯಾಗಿದ್ದ ಭಾರತದೇಶದಲ್ಲಿ ಈ ದಿನ ಮಂತ್ರ ಬಲವೆಂದರೆ ಏನೋ ತಿಳಿಯದೆ ಹೋಗಿದೆ. ಗತ ಚರಿತ್ರೆ ತಿಳಿಯದ ಇಂದಿನ ಭಾರತೀಯರು ಮಂತ್ರಗಳನ್ನು ಕುರಿತು ಹೇಳನವಾಗಿ ಮಾತನಾಡುವ ಸ್ಥಿತಿಗೆ ಬಂದಿದ್ದಾರೆ.

ಪೂರ್ವದಲ್ಲಿ ಕೆಲವು ರೋಗಗಳಿಗೆ ಎಲೆಗಳ ಔಷಧಿಗಳಿದ್ದರೂ, ಕೆಲವು ರೋಗಗಳಿಗೆ ಔಷಧಗಳಿರುತ್ತಿರಲಿಲ್ಲ. ಔಷಧಗಳಿಲ್ಲದ ರೋಗಗಳಿಗೆ ಮಂತ್ರಗಳನ್ನು ಉಪಯೋಗಿಸಿ ಗುಣಪಡಿಸುವ ಪ್ರಕ್ರಿಯೆ ಇರುತ್ತಿತ್ತು. ರೋಗಗಳೊಂದಿಗೆ ದೆವ್ವಗಳು, ದೇವತೆಗಳು ಕಾಣಿಸದಂತೆ ಶರೀರದಲ್ಲಿ ನಿವಾಸ ಏರ್ಪಡಿಸಿಕೊಂಡು ರೋಗಗಳ ಹಾಗೆ ಭಾಧಿಸುವುದು ಸಹ ಆದಿನ ಇರುತ್ತಿತ್ತು. ಆಕಾಲದಲ್ಲಿಯೇ ಅಲ್ಲದೆ ಅಂತಹ ನೋವುಗಳು ಇಂದಿಗೂ ಸಹ ಎಷ್ಟೋ ಜನರನ್ನು ರೋಗಗಳ ಹಾಗೆ ಭಾಧಿಸುತ್ತಿವೆ. ಅಂತಹ ನೋವುಗಳು ರೋಗಗಳಲ್ಲವೆಂದು, ಆ ನೋವುಗಳು ಔಷಧಿಗಳಿಗೆ ನಿವಾರಣೆಯಾಗುವುದಿಲ್ಲವೆಂದು ಬಹಳ ಜನರಿಗೆ ತಿಳಿದಿಲ್ಲ. ಗ್ರಹಗಳ, ದೇವತೆಗಳ ನೋವಿರುವವರು ಆ ನೋವುಗಳನ್ನು ರೋಗಗಳಾಗಿ ಭ್ರಮಿಸಿ ವೈದ್ಯಕ್ಕೆ ಲಕ್ಷಗಳು ಖರ್ಚು ಮಾಡಿದರೂ, ಅವು ಹೋಗದೆ ಅವರಿಗಿರುವ ನೋವುಗಳು ಕಡಿಮೆಯಾಗದವರು ಎಷ್ಟೋ ಜನ ಇದ್ದಾರೆ. ಅಂತಹವರಿಗೆ ಔಷಧವಿಲ್ಲದೆ ಮಂತ್ರಬಲವನ್ನು ಉಪಯೋಗಿಸಿ ಚಿಕಿತ್ಸೆ ಮಾಡಿದರೆ ಅವರ ನೋವುಗಳನ್ನು ನಿವಾರಿಸಬಹುದು. ಆದರೆ ರೋಗಗಳು ಇಂತಹವುಗಳೇ ಎಂದು ತಿಳಿಯದ ಸ್ಥಿತಿ ಮನುಷ್ಯರಿಗಿದೆ. ಒಂದುವೇಳೆ ತಿಳಿದರೂ ಅವುಗಳ ನಿವಾರಣೆಗೆ ಯಾವ ಮಂತ್ರ ಉಪಯೋಗಪಡುತ್ತದೋ ತಿಳಿಯದೆಹೋಗಿದೆ. ಒಂದು ವೇಳೆ ಇಂತದ್ದೆ ಮಂತ್ರದಿಂದ ಆ ರೋಗ ಹೋಗುತ್ತದೆಂದು ತಿಳಿದರೂ ಆ ಮಂತ್ರವನ್ನು ತಿಳಿದವರು ಯಾರೂ ಇಲ್ಲ. ಈ ಕಾಲದಲ್ಲಿಯು ಸಹ ಮಂತ್ರಗಳನ್ನು ನಂಬುವುದೇನೆಂದು, ಹೇಳನ ಮಾಡುವವರಿರುವುದರಿಂದ ಕೆಲವರು ಗ್ರಹಗಳ, ದೇವತೆಗಳ ನೋವಿನಿಂದಲೇ ಮರಣಿಸುವುದು ಸಹ ನಡೆಯುತ್ತದೆ. ಈ ಕಾಲದಲ್ಲಿ ಮಂತ್ರಬಲ ಇಲ್ಲವಾದ್ದರಿಂದ, ಗ್ರಹ ಮತ್ತು ದೇವತೆಗಳ ನೋವುಗಳಿರುವವರು ಕೊನೆಗೆ ನಿವಾರಣೆ ಇಲ್ಲದೆ ಮರಣಿಸಬೇಕಾಗಿರುವುದೇನಾ ಎಂದು ಕೇಳಬಹುದು. ಅದಕ್ಕೆ ಉತ್ತರವಾಗಿ ಒಂದುಮಾತನ್ನು ಹೇಳಬಹುದು. ಮಂತ್ರಗಳು ಇಲ್ಲದಿರುವ ಮಾತು ವಾಸ್ತವವೆ ಆದರೂ ಗ್ರಹಗಳ, ದೇವತೆಗಳ ನೋವಿನಿಂದ ವಿಮುಕ್ತಿ ಹೊಂದಲು ಒಂದೇ ಒಂದು ದಾರಿ ಇದೆ. ಅದೇ ದೈವಜ್ಞಾನ. ದೈವಜ್ಞಾನವನ್ನು ತಿಳಿಯುವು ದರಿಂದ ಗ್ರಹಗಳಾಗಲಿ, ದೇವತೆಗಳಾಗಲಿ ಬಿಟ್ಟುಹೋಗದೆ ತಪ್ಪೋಲ್ಲ.

ಮಂತ್ರ ಬಲಕ್ಕಿಂತ ಜ್ಞಾನಬಲ ದೊಡ್ಡದು. ಮಂತ್ರಬಲವು ಸಹಾ ಜ್ಞಾನಿಗಳಿಂದ ಹುಟ್ಟುವುದು. ಪ್ರಸ್ತುತವಾಗಿ ರೋಗಕ್ಕೆ ತಕ್ಕ ಮಂತ್ರ ಇಲ್ಲದಿರುವುದರಿಂದ, ಮಂತ್ರಕ್ಕಿಂತ ಮೀರಿದ ದೈವಜ್ಞಾನವನ್ನು ತಲೆಗೇರಿಸಿಕೊಂಡು ಶರೀರದೊಳಗೆ ಜೀರ್ಣಿಸಿಕೊಂಡರೆ ಅಂತವನಿಗೆ ಗ್ರಹಗಳ, ದೇವತೆಗಳ ನೋವು ಇಲ್ಲದೆ ಹೋಗುತ್ತದೆ.

ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! ಪೂರ್ವದಲ್ಲಿ ಗ್ರಹಗಳ ಬಾಧೆಗಳನ್ನು, ದೇವತೆಗಳ ಬಾಧೆಗಳನ್ನು ಇಲ್ಲದ ಹಾಗೆ ಮಾಡುವುದಕ್ಕೆ ಮಂತ್ರಬಲವನ್ನು ಉಪಯೋಗಿಸುತ್ತಿದ್ದರೆಂದು ನೀವು ಹೇಳುತ್ತಿದ್ದೀರ ಅಲ್ಲವೆ! ಹಾಗಿರುವಾಗ ಗ್ರಹಗಳು ರೋಗಗಳ ರೂಪದಲ್ಲಿ ವ್ಯಕ್ತಿಯನ್ನು ನೋಯಿಸದೆ ಮಂತ್ರಗಳನ್ನು ಉಪಯೋಗಿಸಿ ಅವುಗಳನ್ನು ಇಲ್ಲದಹಾಗೆ ಮಾಡಿದಾಗ, ಅಂತಹ ಮಂತ್ರಗಳನ್ನು ಉಪಯೋಗಿಸಿ ಗ್ರಹಗಳ ನೋವಿಲ್ಲದವ ರಿಗೂ ಸಹಾ ರೋಗಗಳ ರೂಪದಲ್ಲಿರುವ ಗ್ರಹಗಳ ನೋವನ್ನು ಕಲ್ಪಿಸಬಹುದು ಅಲ್ಲವೆ! ಮಂತ್ರಬಲದಿಂದ ಕೆಲವು ನೋವುಗಳನ್ನು ನಿವಾರಿಸಿದಾಗ, ಅದೇ ಮಂತ್ರಬಲದಿಂದಲೇ ಕೆಲವು ನೋವುಗಳನ್ನು ಕಲ್ಪಿಸುವುದಕ್ಕೆ ಅವಕಾಶವಿದೆ ತಾನೆ! ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಹೀಗಿದೆ. ಪೂರ್ವಕಾಲದಲ್ಲಿ ಮಾಂತ್ರಿಕರಾದವರು ಕೆಲವು ಗ್ರಹಗಳ ನೋವನ್ನು ತಮ್ಮ ಮಂತ್ರಬಲದಿಂದ ಇಲ್ಲದೆ ಮಾಡುವಂತಹ ಸಾಮರ್ಥ್ಯವುಳ್ಳವರು, ಅದೇ ವಿಧಾನವನ್ನು ಅನುಸರಿಸಿ ತಮ್ಮ ಮಂತ್ರಬಲದಿಂದ ಗ್ರಹಗಳನ್ನು ಪ್ರೇರೇಪಿಸಿ ಕೆಲವರಲ್ಲಿ ಸೇರುವಹಾಗೆ ಮಾಡಿ ಅವರು ನೋವನ್ನು ಅನುಭವಿಸುವಂತೆ ಮಾಡುತ್ತಿದ್ದರು. ಕೆಲವು ಮಾಂತ್ರಿಕರು ಒಳ್ಳೆಯ ಗುಣವಿರುವವರಾಗಿ ತಮಗೆ ಇಷ್ಟವಾದವರಿಗೆ ಮಂತ್ರಗಳಿಗೆ ತೊಲಗುವ ನೋವುಗಳನ್ನು ಇಲ್ಲದಂತೆ ಮಾಡಿದರೆ, ಕೆಲವರು ಮಾಂತ್ರಿಕರು ಮಾತ್ರ ಇತರರಿಗೆ ಹಾನಿಮಾಡುವ ಕೆಟ್ಟ ಬುದ್ಧಿ ಇರುವವರಾಗಿ, ಮಂತ್ರಬಲವನ್ನು ಉಪಯೋಗಿಸಿ ಇತರರಿಗೆ ಹಾನಿಮಾಡುವ ಕೆಟ್ಟ ಮಂತ್ರ ಪ್ರಯೋಗ, (ಬಾಣಾಮತಿ, ಚಿಲ್ಲಂಗಿ) ಮಾಡಿ, ತಮಗೆ ಸರಿಹೋಗದವರನ್ನು, ತಮಗೆ

ಶತ್ರುಗಳಾಗಿ ಇರುವವರಿಗೆ ನೋವನ್ನು ಅನುಭವಿಸುವಂತೆ ಮಾಡುತ್ತಿದ್ದರು. ಇದನ್ನನುಸರಿಸಿ ನೋಡಿದರೆ ಪೂರ್ವಕಾಲದಲ್ಲಿ ಮಂತ್ರಗಳನ್ನು ಕಲಿತ ಮಾಂತ್ರಿಕರಲ್ಲಿ ಒಳ್ಳೆಯ, ಕೆಟ್ಟ ಎರಡು ವಿಧದವರು ಇರುತ್ತಿದ್ದರೆಂದು, ಒಳ್ಳೆಯ ಸ್ವಭಾವವಿರುವವರು ಇತರರಿಗೆ ತಮ್ಮ ಮಂತ್ರಬಲದಿಂದ ಒಳ್ಳೆಯದು ಮಾಡಿದರೆ, ಕೆಟ್ಟ ಸ್ವಭಾವವಿರುವವರು ಇತರರಿಗೆ ಕೆಟ್ಟದ್ದನ್ನು ಮಾಡುತ್ತಿದ್ದರು. ಈಗಿನ ಕಾಲದಲ್ಲಿ ಮಂತ್ರಬಲವೇ ಇಲ್ಲದೇ ಹೋಗಿದೆ, ಆದ್ದರಿಂದ ಮಂತ್ರಗಳಿಂದ ಒಳ್ಳೆಯದು ಮಾಡುವವರೂ ಇಲ್ಲ, ಕೆಟ್ಟದ್ದು ಮಾಡುವವರೂ ಇಲ್ಲ.

ಪ್ರಸ್ತುತ ಕಾಲದಲ್ಲಿ ಮಂತ್ರಗಾರರೆ ಕಣ್ಮರೆಯಾಗಿದ್ದಾರೆ. ಎಲ್ಲಿಯೂ ಯಾರೂ ಕಾಣಿಸುತ್ತಿಲ್ಲ, ಎಂದು ನಾವು ಹೇಳಿದ ನಂತರ ಭೂಮಿಮೇಲೆ ಮಂತ್ರಗಳು ಯಾವುವೂ ಇಲ್ವಾ? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ. ಪ್ರತಿ ಎಲೆ ಔಷಧವೆ, ಪ್ರತಿ ಮಾತು ಮಂತ್ರವೆ ಎಂದು ಹೇಳಿದ ಹಿರಿಯರ ಮಾತಿನ ಪ್ರಕಾರ, ಪ್ರಪಂಚವಿರುವವರೆಗೂ ಎಲೆಗಳ ಔಷಧಗಳು ಇರುತ್ತವೆ. ಹಾಗೆ ಮಾತುಗಳ ಮಂತ್ರಗಳು ಇರುತ್ತವೆ. ಆದರೆ ಅಂದುಕೊಂಡ ಕೆಲಸಗಳನ್ನು ಸಾಧಿಸುವ ಬಲವಿರುವ ಮಂತ್ರಗಳು ಇಲ್ಲವೆಂದು ಹೇಳುತ್ತಿದ್ದೇವೆ. ಎಷ್ಟೋ ವಿಧವಾದ ಮಾತುಗಳು ಎಷ್ಟೋ ವಿಧಗಳ ಮಂತ್ರಗಳಾಗಿ ಇಂದಿಗೂ ಭೂಮಿಮೇಲೆ ಇದ್ದರೂ, ಅವುಗಳನ್ನು ಸಿದ್ಧಿಮಾಡಿಕೊಳ್ಳುವವರು ಇಲ್ಲ. ಸಿದ್ಧಿ ಇಲ್ಲದೆ ಹೋದರೆ ಮಂತ್ರವಿದ್ದರೂ ನಿರರ್ಥಕವೆ ಆಗುತ್ತದೆ. ಭೂಮಿಮೇಲೆ ಎಲೆಗಳೆಲ್ಲಾ ಔಷಧಗಳೇ ಆದರೂ ಅವುಗಳನ್ನು ಉಪಯೋಗಿಸುವ ವಿಧಾನ ತಿಳಿಯದೆ ಹೋಗಿರುವುದರಿಂದ ಔಷಧಿಗಳೆಲ್ಲಾ ವ್ಯರ್ಥ ಆದಹಾಗೆ, ಮಾತುಗಳೆಲ್ಲಾ ಮಂತ್ರಗಳೇ ಆದರೂ ಅ ವುಗಳನ್ನು ಮಂತ್ರಬಲವಾಗಿ ಬದಲಾಯಿಸುವ ಸಿದ್ಧಿ ಇಲ್ಲದೆ ಹೋಗಿರುವುದರಿಂದ ಮಂತ್ರಗಳು ವ್ಯರ್ಥವಾಗಿ ಹೋಗುತ್ತಿವೆ. ಪ್ರತಿ ರೋಗವನ್ನು ಇಲ್ಲದೆ ಮಾಡುವ ಔಷಧಗಳಾದ ಎಲೆಗಳು ಭೂಮಿಮೇಲೆ ಸಮೃದ್ಧಿಯಾಗಿ ಇದ್ದರೂ, ಅವುಗಳನ್ನು ಹೇಗೆ ಉಪಯೋಗಿಸಿ ಕೊಳ್ಳಬೇಕೊ ತಿಳಿಯದ ಹಾಗೆ, ಮಂತ್ರಗಳಾದ ಮಾತುಗಳು ಎಷ್ಟೋ ಇದ್ದರೂ, ಅವುಗಳನ್ನು ಸಿದ್ಧಿಮಾಡಿಕೊಳ್ಳುವ ವಿಧಾನ ಇಂದಿನ ಮನುಷ್ಯನಿಗೆ ತಿಳಿಯದೆ

ಹೋಗಿದೆ. ನಾವು ಭೂಮಿಮೇಲೆ ಮಂತ್ರಗಳು ಇಲ್ಲ ಎನ್ನುವುದಿಲ್ಲ. ಮಂತ್ರಗಳ ಬಲ ಇಲ್ಲದೇ ಹೋಗಿದೆಯೆಂದು ಅನ್ನುತ್ತಿದ್ದೇವೆ.

ಪೂರ್ವದಲ್ಲಿ ಮಂತ್ರಬಲಗಳು ಎಷ್ಟೋ ವಿಧಗಳಲ್ಲಿ ಇರುತ್ತಿದ್ದವು. ಅವುಗಳ ಬಲದಿಂದ ಎಷ್ಟೋ ವಿಧಗಳ ಕೆಲಸಗಳು ನಡೆಯುತ್ತಿದ್ದವು. ಈಗಿನ ಕಾಲದಲ್ಲಿ ಸಹ ಎಷ್ಟೋ ಮಂತ್ರಗಳನ್ನು ನಾವು ನೋಡುತ್ತಿದ್ದೇವೆ. ಇಂದಿಗೂ ಅಂದಿಗೂ ಮಂತ್ರ ಮಂತ್ರವೇ ಆದರೂ, ಅವುಗಳ ಉಪಯೋಗ ಈಗ ಇಲ್ಲ, ಆಗ ಇರುತ್ತಿತ್ತು. ಪೂರ್ವಕಾಲದಲ್ಲಿ ಮಂತ್ರಗಳು ಎಷ್ಟೋ ವಿಧಗಳಲ್ಲಿ ಉಪಯೋಗವಾದರೂ, ಅವುಗಳ ಉಪಯೋಗವೆಲ್ಲಾ ಪ್ರಪಂಚಕ್ಕೆ ಸಂಬಂಧಿಸಿರುವುದೇ ಆಗಲಿ, ಪರಮಾತ್ಮನಿಗೆ ಸಂಬಂಧಿಸಿರುವಂತದ್ದಲ್ಲ. ಈಗಿನ ಕಾಲದಲ್ಲಿ ಕೆಲವರು ಸ್ವಾಮೀಜಿಗಳು, ಪೀಠಾಧಿಪತಿಗಳು, ಮಠಾಧೀಶರು ಎಲ್ಲರೂ ಮಾತುಗಳ ರೂಪದಲ್ಲಿದ್ದ ಅಥವಾ ಶಬ್ಧರೂಪದಲ್ಲಿರುವ ಮಂತ್ರಗಳನ್ನೇ ಆಧಾರ ಮಾಡಿಕೊಂಡು ನಾವು ದೈವಮಾರ್ಗದಲ್ಲಿ ಇದ್ದೇವೆಂದು ಹೇಳುತ್ತಿರುತ್ತಾರೆ. ಆದರೆ ಯಾವ ಮಂತ್ರವಾಗಲಿ ದೈವದ ಹತ್ತಿರಕ್ಕೆ ಸೇರಿಸುವುದಿಲ್ಲವೆಂದು, ಯಾವ ಮಂತ್ರದಿಂದ ದೇವರು ತಿಳಿಯುವುದಿಲ್ಲವೆಂದು ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ಮಾತನ್ನು ಎಲ್ಲರೂ ಮರೆತು ಹೋಗಿದ್ದಾರೆ. ಪೂರ್ವದಲ್ಲಾಗಲಿ, ಈಗಿನ ಕಾಲದಲ್ಲಾಗಲಿ ಮಂತ್ರಗಳು ಎಷ್ಟಿದ್ದರೂ ಅವೆಲ್ಲವೂ ಉಪಯೋಗವಾದರೆ, ಆ ಉಪಯೋಗವೆಲ್ಲಾ ಉಪ (ಪಕ್ಕದ) ಯೋಗವೇ ಆಗಲಿ ಯೋಗ ಅಲ್ಲ. ಆದ್ದರಿಂದ ಒಳ್ಳೆಯ ಜ್ಞಾನಿಗಳಾದ ಹಿರಿಯರು "ಮಂತ್ರಗಳೆಲ್ಲಾ ಪ್ರಪಂಚ ಸಂಬಂಧ ಲಾಭವನ್ನು ಕೊಡುವವೆಯಾಗಲಿ, ಪರಮಾತ್ಮ ಸಂಬಂಧವಾದ ಮೋಕ್ಷವನ್ನು ಹೊಂದಿಸುವು ದಿಲ್ಲ" ಎಂದು ಹೇಳಿದ್ದಾರೆ.

ವಿಶ್ವವನ್ನು ಎರಡು ವಿಧಗಳಾಗಿ ವಿಭಜಿಸಬಹುದು. ಒಂದು ಸ್ಥೂಲ, ಎರಡು ಸೂಕ್ಷ್ಮ ಎನ್ನುವ ಎರಡು ಭಾಗಗಳಾಗಿ ವಿಶ್ವವಿದೆಯೆಂದು ಹೇಳಬಹುದು. ಸ್ಥೂಲಭಾಗ ಎಲ್ಲರಿಗೂ ಕಾಣಿಸುತ್ತದೆ. ಕಣ್ಣಿಗೆ ಕಾಣಿಸುವ ಸರ್ವಜಗತ್ತು ಸ್ಥೂಲವಾಗಿದೆ, ಕಣ್ಣಿಗೆ ಕಾಣಿಸದ ಕೋಟ್ಯಾದಿ ಮನುಷ್ಯರು, ಪಶು, ಪಕ್ಷಿ, ಕ್ರಿಮಿ

ಕೀಟಾದಿಗಳನ್ನು ಸೂಕ್ಷ್ಮಗಳೆಂದು ಹೇಳಬಹುದು. ಹಾಗೆ ಗ್ರಹಗಳು, ಉಪಗ್ರಹಗಳು, ಉಪಭೂತಗಳು, ಭೂತಗಳು, ಮಹಾಭೂತಗಳವರೆಗು ಕೋಟ್ಯಾದಿ ಸೂಕ್ಷ್ಮ ವಿಶ್ವವಿದೆಯೆಂದು ಹೇಳಬಹುದು. ಕಣ್ಣಿಗೆ ಕಾಣಿಸದವುಗಳಲ್ಲಿ ಕಡಿಮೆ ಮಟ್ಟದ ಗ್ರಹಗಳು ಮೊದಲುಗೊಂಡು, ಹೆಚ್ಚಿನ ಮಟ್ಟದ ಬಲವಿರುವ ಗ್ರಹಗಳ ವರೆಗು ಮಂತ್ರಗಳನ್ನು ಆಶ್ರಯಿಸಿರುವರು. ಮಂತ್ರಗಳಲ್ಲಿ ಚಿಕ್ಕದು ದೊಡ್ಡದು ಅನೇಕ ವಿಧಗಳ ಮಂತ್ರಗಳು ಇವೆ. ಮಂತ್ರಗಳ ಬಲಕ್ಕೆ ಅಥವಾ ಕೆಲಸಕ್ಕೆ ತಕ್ಕ ಬಲವಿರುವ ಗ್ರಹಗಳು ಆಯಾ ಮಂತ್ರಗಳಿಗೆ ಅಧಿಪತಿಗಳಾಗಿ ಬಂದು ಸೇರುತ್ತವೆ. ಯಾವ ಮಂತ್ರಕ್ಕೆ ಯಾವ ಗ್ರಹ ಆಧಿಪತ್ಯವನ್ನು ವಹಿಸಬೇಕೊ ಆ ಗ್ರಹದ ಆತ್ಮ ನಿರ್ಣಯಿಸುವುದು. ಈ ವಿಧದಲ್ಲಿ ಅನೇಕ ಹಂತದ ಮಂತ್ರಗಳಿಗೆ ತಕ್ಕ ಸ್ಥಾನವಿರುವ ಗ್ರಹಗಳು ಜವಾಬ್ದಾರಿ ವಹಿಸುತ್ತವೆಂದು ತಿಳಿಯುತ್ತಿದೆ. ಹೀಗೆ ಪ್ರಪಂಚದಲ್ಲಿನ ಮಂತ್ರಗಳೆಲ್ಲವುಗಳಿಗೂ ಗ್ರಹಗಳು ಜವಾಬ್ದಾರಿ ವಹಿಸಿದರೂ, ಲೆಕ್ಕವಿಲ್ಲದಷ್ಟು ಕೋಟಿ ಗ್ರಹಗಳ ಸಂಖ್ಯೆಯಲ್ಲಿ ಕೆಲವು ಸಾವಿರ ಗ್ರಹಗಳು ಮಾತ್ರವೆ ಮಂತ್ರಗಳ ಜವಾಬ್ದಾರಿ ಹೊಂದಿ, ಮಂತ್ರಗಳಿಗೆ ಬಲವಾಗಿ ಇವೆ. ಮಂತ್ರಗಳಿಗೆ ಶಕ್ತಿಯಾಗಿ (ಬಲವಾಗಿ) ಸೇರಿದ ಗ್ರಹಗಳೇ ಅಲ್ಲದೆ, ಎಷ್ಟೋ ಕೋಟಿ ಗ್ರಹಗಳು ಖಗೋಳದಲ್ಲಿ ಇವೆ. ಖಗೋಳದಲ್ಲಿರುವ ಗ್ರಹಗಳಲ್ಲಿ ಮಂತ್ರ ಗ್ರಹಗಳಿಗಿಂತ ಚಿಕ್ಕ ಗ್ರಹಗಳು, ದೊಡ್ಡ ಗ್ರಹಗಳು ಎಷ್ಟೋ ಇವೆ. ಖಗೋಳದಲ್ಲಿರುವ ಗ್ರಹಗಳು, ಭೂತಗಳು ಎಲ್ಲಾ 99% ರಷ್ಟು ದೈವಜ್ಞಾನ ಹೊಂದಿರುವವೆ ಇವೆ. ಅವುಗಳಲ್ಲಿ ಒಂದು ಅಥವಾ ಎರಡು ಶಾತ ಗ್ರಹಗಳು, ಭೂತಗಳು ಮಾತ್ರವೆ ಜ್ಞಾನವಿಲ್ಲದವುಗಳಾಗಿ ಇರುತ್ತವೆ. ಮಂತ್ರ ಮಹಿಮೆ ಇರುವ ಗ್ರಹಗಳಿಗೆ ಜ್ಞಾನವಿಲ್ಲದ ಗ್ರಹಗಳು, ಭೂತಗಳು ಮಾತ್ರವೇ ಭಯಪಡುತ್ತವೆ. ದೈವಜ್ಞಾನವಿರುವ ಗ್ರಹಗಳು, ಭೂತಗಳು ಮಂತ್ರಬಲವಿರುವ ಗ್ರಹಗಳಿಗಿಂತ ಚಿಕ್ಕವಾದರು ದೊಡ್ಡ ಮಂತ್ರಬಲಗಳಿಗು ಸಹ ಭಯಪಡುವುದಿಲ್ಲ. ದೈವಜ್ಞಾನವಿರುವ ಚಿಕ್ಕ ಗ್ರಹಕ್ಕೆ ದೊಡ್ಡ ಮಂತ್ರಶಕ್ತಿಯಾಗಿರುವ ಗ್ರಹವು ಸಹ ಭಯಪಡುತ್ತದೆ. ದೈವಬಲ ಸ್ವಲ್ಪವೂ ಇಲ್ಲದೆ ಕೇವಲ ಮಂತ್ರ ಬಲವಿರುವ ಗ್ರಹಗಳಿಗೆ ದೈವ ಜ್ಞಾನವಿರುವ ಯಾವ ಗ್ರಹವಾಗಲಿ, ಯಾವ ಭೂತವಾಗಲಿ ಭಯಪಡುವುದಿಲ್ಲವೆಂದು ತಿಳಿಯಬೇಕು.

ಮಾಂತ್ರಿಕರು ಯಾರಾದರೂ ತಮ್ಮ ಅಜ್ಞಾನದಿಂದ, ತಾವು ಮಾಂತ್ರಿಕರೆನ್ನುವ ಗರ್ವದಿಂದ ದೈವಜ್ಞಾನವಿರುವವರನ್ನು ಗೌರವಿಸದೆ ಹೋದರೂ, ಹೇಳನವಾಗಿ ಮಾತನಾಡಿದರೂ, ಕೀಳು ಭಾವನೆಯಿಂದ ನೋಡಿದರೂ ಜ್ಞಾನಿಗಳು ಅಥವಾ ಯೋಗಿಗಳಲ್ಲಿರುವ ದೈವಶಕ್ತಿಗೆ ಮಂತ್ರಶಕ್ತಿ ನಿರ್ವೀರ್ಯವಾಗಿ ಹೋಗುವುದು. ಅಲ್ಲಿಯವರೆಗು ಮಂತ್ರಬಲವಿರುವ ಮಾಂತ್ರಿಕನು ಅಲ್ಲಿಂದ ಯಾವುದೆ ಮಂತ್ರಬಲ ಇಲ್ಲದಂತಾಗುವನು. ಜ್ಞಾನಿಗಳು, ಯೋಗಿಗಳು ಮಾಂತ್ರಿಕರಿಗೆ ಕೆಟ್ಟದ್ದನ್ನು ಮಾಡಬೇಕೆಂದು ಅಂದುಕೊಳ್ಳದೆ ಇದ್ದರೂ ಆಕಸ್ಮಿಕವಾಗಿ ಒಂದು ವೇಳೆ ಮಾಂತ್ರಿಕನು ಜ್ಞಾನಿ ಅಥವಾ ಯೋಗಿ ಸಮ್ಮುಖದಲ್ಲಿ ಬಂದಾಗ ಮಾಂತ್ರಿಕನಲ್ಲಿನ ಗ್ರಹಶಕ್ತಿ ಯೋಗಿ ಅಥವಾ ಜ್ಞಾನಿಗಳಲ್ಲಿನ ಜ್ಞಾನಶಕ್ತಿಗೆ ತಾಳಲಾರದೆ ಮಾಂತ್ರಿಕನನ್ನು ಬಿಟ್ಟು ಓಡಿ ಹೋಗುವುದು. ಅಷ್ಟಕ್ಕೆ ಮಾಂತ್ರಿಕನು ಎಷ್ಟೋ ಕಷ್ಟ ಪಟ್ಟು ಸಿದ್ಧಿ ಮಾಡಿಕೊಂಡ ಮಂತ್ರಬಲ ಆತನಿಗೆ ಇಲ್ಲದೆ ಹೋಗುತ್ತದೆ. ಈ ವಿಧದಲ್ಲಿ ಎಷ್ಟೋ ಜನ ಮಾಂತ್ರಿಕರು ತಮ್ಮ ಶಕ್ತಿಗಳನ್ನು ಯೋಗಿಗಳ ಹತ್ತಿರ, ಜ್ಞಾನಿಗಳ ಹತ್ತಿರ ಕಳೆದುಕೊಂಡಿರುವುದು ನಡೆದಿದೆ. ಇದನ್ನು ಅನುಸರಿಸಿ ನೋಡಿದರೆ ಮಂತ್ರ ಶಕ್ತಿ ದೈವಶಕ್ತಿಗಿಂತ ಬಹಳ ಚಿಕ್ಕದೆಂದು, ದೈವಶಕ್ತಿ ಸನ್ನಿಧಿಯಲ್ಲಿ ಮಂತ್ರಶಕ್ತಿಗಳು ನಿಲ್ಲುವುದಿಲ್ಲವೆಂದು ತಿಳಿದುಹೋಗುತ್ತದೆ. ಕೆಲವು ಮಂತ್ರಶಕ್ತಿಗಳು ಮಾಂತ್ರಿಕರ ಆಜ್ಞೆ ಪ್ರಕಾರ ಕೆಲವು ಮನುಷ್ಯರಲ್ಲಿ ಸೇರಿ ಆ ಮನುಷ್ಯರನ್ನು ನೋವಿನಿಂದ ಬಳಲುವಂತೆ ಮಾಡುತ್ತವೆ. ಮಂತ್ರಶಕ್ತಿಯಿಂದ ನೋವು ಅನುಭವಿಸುವ ಮನುಷ್ಯರು ಯೋಗಿಗಳ ಹತ್ತಿರಕ್ಕೆ ಬಂದಾಗ ಯೋಗಿಗಳಲ್ಲಿನ ದೈವಶಕ್ತಿಯನ್ನು ನೋಡಿ ಭಯಪಟ್ಟು ಆ ಮನುಷ್ಯರನ್ನು ಬಿಟ್ಟು ಓಡಿಹೋಗುವುದು ಸಹ ನಡೆಯುತ್ತಿರುತ್ತದೆ. ದೈವಶಕ್ತಿಗೆ ಭಯಪಡುವ ಮಂತ್ರಶಕ್ತಿಗಳು ದೈವಜ್ಞಾನ ಹೊಂದಿರುವ ಗ್ರಹಗಳಿಗೂ, ಭೂತಗಳಿಗೂ ಸಹ ಭಯಪಡುತ್ತವೆ. ಆದ್ದರಿಂದ ಮಂತ್ರಬಲ ಅಥವಾ ಮಂತ್ರಶಕ್ತಿ, ದೈವಜ್ಞಾನವಿರುವ ಮನುಷ್ಯರನ್ನಾಗಲಿ, ಗ್ರಹಗಳನ್ನಾಗಲಿ, ಭೂತಗಳನ್ನಾಗಲಿ ಏನು ಮಾಡುವುದಿಲ್ಲ ವೆಂದು ತಿಳಿಯುತ್ತದೆ.

ಪೂರ್ವಕಾಲದಲ್ಲಿ ಎಷ್ಟೋ ಪ್ರಾಬಲ್ಯತೆಯಿಂದ ಮನುಷ್ಯರಲ್ಲಿ ವ್ಯಾಪಿಸಿದ್ದ ಮಂತ್ರಶಕ್ತಿ, ಈ ದಿನ ಭೂಮಿಮೇಲೆ ಸ್ವಲ್ಪವಾದರೂ ಕಾಣಿಸದೆ ಹೋಗುವುದಕ್ಕೆ, ಯಂತ್ರಶಕ್ತಿ ಹೆಚ್ಚಿನದಾಗಿ ಮನುಷ್ಯರಲ್ಲಿ ವ್ಯಾಪಿಸಿ ಹೋಗಿರುವುದಕ್ಕೆ ಕಾರಣವೇನು ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವನ್ನು ವಿವರವಾಗಿ ಹೇಳಿಕೊಂಡರೆ ಹೀಗಿದೆ. ಮಂತ್ರಗಳು ಮಾತಿನ ರೂಪದಲ್ಲಿ ಇಂದಿಗೂ ಸಹ ಇವೆ. ವೇದಗಳಲ್ಲಿ ಎಷ್ಟೋ ಮಂತ್ರಗಳು ಹೇಳಲಾಗಿವೆ. ಹಾಗೆ ಕೆಲವರು ದೇವತೆಗಳ ಹತ್ತಿರ ಕೆಲವು ಮಂತ್ರಗಳನ್ನು ಅಲ್ಲಲ್ಲಿ ಹೇಳುತ್ತಲೇ ಇದ್ದಾರೆ. ಪ್ರತಿನಿತ್ಯ ಎಷ್ಟೋಜನ ದೇವಾಲಯಗಳಲ್ಲಿಯೂ, ಕೆಲವು ಆರಾಧನೆಗಳಲ್ಲಿಯೂ ಮಂತ್ರೋಚ್ಚಾರಣೆ ಮಾಡುತ್ತಿದ್ದಾರೆ. ಕೆಲವರು ಗಾಯಿತ್ರಿ ಮಂತ್ರವನ್ನು ಪ್ರತಿನಿತ್ಯ ಪಠಿಸುತ್ತಿದ್ದಾರೆ. ಆದರೆ ಅವುಗಳಲ್ಲಿರುವ ಶಕ್ತಿ ಮಾನವನಿಗೆ ಯಾವ ಕಡೆಯೂ ಉಪಯೋಗ ಪಡಲಿಲ್ಲ. ಹೀಗೆ ಎಷ್ಟೋ ಮಂತ್ರಗಳನ್ನು ಮನುಷ್ಯರು ಪ್ರತಿ ದಿನ ಜಪಿಸುತ್ತಿದ್ದರು ಅವು ಏಕೆ ಉಪಯೋಗ ಪಡುತ್ತಿಲ್ಲ ಎಂದು ಯೋಚಿಸಿದರೆ ಹೀಗೆ ತಿಳಿಯುತ್ತದೆ. ಹಿರಿಯರು ಒಂದು ಗಾದೆಯನ್ನು ಹೇಳುತ್ತಿದ್ದರು. ಅದೇನೆಂದರೆ "ಎಲ್ಲಾ ಇದ್ದರೂ ಅಳಿಯನ ಬಾಯಲ್ಲಿ ನಾಲಿಗೆ ಇಲ್ಲ" ಎಂದು ಅನ್ನುತ್ತಿದ್ದರು. ಸಕಲ ತಿನುಬಂಡಾರಗಳನ್ನು ಅತ್ತೆಯವರು ತಂದು ಅಳಿಯನ ಮುಂದಿಟ್ಟರೆ, ಅಳಿಯ ಎಲ್ಲವನ್ನು ತಿಂದರೂ ತಿಂದಿರುವವು ಯಾವ ರುಚಿಯಲ್ಲಿವೆಯೋ ಹೇಳದೆ ಹೋಗಿದ್ದಾನಂತೆ. ಅದೇ ವಿಧದಲ್ಲಿ ನಮ್ಮ ಮುಂದೆ ನಿತ್ಯವೂ ಪಠಿಸುವ ಎಷ್ಟೋ ಮಂತ್ರಗಳಿದ್ದರೂ ಅವುಗಳ ಬಲವನ್ನು ನಿರ್ಣಯಿಸುವ ಸಿದ್ಧಿ ಇಲ್ಲದೆ ಹೋಗಿರುವುದರಿಂದ ಆ ಮಂತ್ರಗಳು ಯಾವುದಕ್ಕು ಕೆಲಸಕ್ಕೆ ಬಾರದೆ ಹೋಗಿವೆ. ಕೆಲವು ಇಟ್ಟಿಗೆಗಳನ್ನು ಒಂದು ಕಡೆ ಕುಪ್ಪೆ ಹಾಕಿದರೆ, ಆ ಕುಪ್ಪೆ ಮನೆಯಲ್ಲ. ಆ ಇಟ್ಟಿಗೆಗಳನ್ನೆ ಕ್ರಮಬದ್ಧತೆಯಾಗಿ ಜೋಡಿಸಿದರೆ ಮೊದಲು ಗೋಡೆಯಾಗುತ್ತದೆ ನಂತರ ಮನೆಯಾಗುತ್ತದೆ. ಹಾಗಲ್ಲದೆ ಪ್ರತಿ ದಿನವೂ ಇಟ್ಟಿಗೆಗಳನ್ನು ತಂದು ಕುಪ್ಪೆ ಹಾಕಿದರೂ, ಕೆಲವು ವರ್ಷಗಳವರೆಗೂ ಕೆಲವು ಲಕ್ಷ ಇಟ್ಟಿಗೆಗಳನ್ನು ಹಾಕಿದರೂ ಆ ಇಟ್ಟಿಗೆಗಳು ದೊಡ್ಡ ಕುಪ್ಪೆ ಆಗುತ್ತವೆ. ಆದರೆ ಮನುಷ್ಯನಿಗೆ ಆ ಕುಪ್ಪೆ ಯಾವ ವಿಧದಲ್ಲಿಯು ಉಪಯೋಗಪಡುವುದಿಲ್ಲ. ಇಟ್ಟಿಗೆಗಳ ಕಥೆ

ಹಾಗೆ ಪ್ರಸ್ತುತ ಕಾಲದಲ್ಲಿ ಎಷ್ಟೋ ಜನ ಅರ್ಚಕರು ಗುಡಿಗಳಲ್ಲಿಯೂ, ಎಷ್ಟೋ ಜನ ಆರಾಧಕರು ಗೃಹಗಳಲ್ಲಿಯೂ, ಮತ್ತೆಷ್ಟೋ ಜನ ಉಪಾಸಕರು ಗಾಯಿತ್ರಿ ಮಂತ್ರವನ್ನು ಪಠಿಸುತ್ತಿದ್ದರೂ, ದಾರಕ್ಕೆ ಪೋಣಿಸದ ಹೂವು ಗಾಳಿಗೆ ಹೋದಹಾಗೆ ಅವರ ಆರಾಧನೆಗಳು, ಉಪಾಸನೆಗಳು ವ್ಯರ್ಥವಾಗುತ್ತಿವೆ. ಹಾಗೆ ಆಗುವುದಕ್ಕೆ ಕಾರಣ ಆ ಮಂತ್ರಗಳನ್ನು ತಯಾರು ಮಾಡಿದವರು ಅವುಗಳಿಗೆ ಬೇಕಾದ ನಿಯಮವನ್ನು ಏರ್ಪಡಿಸಿ, ಆ ಮಂತ್ರಗಳಿಗೆ ಸಿದ್ಧಿ ಸೂತ್ರವನ್ನು ಹೇಳಲಿಲ್ಲ. ಆದ್ದರಿಂದ ಆ ಮಂತ್ರಗಳೆಲ್ಲ ಯಾವ ಹಾರವಾಗದೆ ಬಿಡಿ ಹೂವುಗಳಾಗಿ ಹೋಗಿವೆ.

ಔಷಧಕ್ಕೆ ಅದನ್ನು ಶುದ್ಧಿ ಮಾಡಿಕೊಳ್ಳುವ ವಿಧಾನ ಎಷ್ಟು ಮುಖ್ಯವೊ ಒಂದು ಮಂತ್ರಕ್ಕೆ ಅದನ್ನು ಸಿದ್ಧಿ ಮಾಡಿಕೊಳ್ಳುವ ವಿಧಾನವೂ ಸಹ ಅಷ್ಟೇ ಮುಖ್ಯ. ಔಷಧಿಗಳಲ್ಲಿ ಪನ್ನೇರು ಗಡ್ಡೆಯನ್ನು ಹಸುವಿನ ಹಾಲಿನೊಂದಿಗೆ ಕುದಿಸಿದರೆ ಅದು ಶುದ್ಧಿಯಾಗಿ ಅದಕ್ಕೆ ಔಷಧಗುಣ ಬಂದು ಔಷಧವಾಗುತ್ತದೆ. ಹಾಗೆ ನೇಪಾಲ ಬೀಜವನ್ನು ಹಸು ಸಗಣಿಯ ರಸದಿಂದ ಕುದಿಸಿದರೆ ಅದು ಶುದ್ಧಿಯಾಗಿ ಔಷಧವಾಗುತ್ತದೆ. ಹಾಗೆ ನಾಲ್ಕು ಅಕ್ಷರಗಳ ಹೊಟ್ಟೆನೋವು ನಿವಾರಣೆ ಮಂತ್ರವನ್ನು ಹತ್ತುಸಾವಿರ ಬಾರಿ ಏಕದಾಟಿಯಲ್ಲಿ ಜಪಿಸಿದರೆ, ಆ ಮಂತ್ರ ಸಿದ್ಧಿಯಾಗಿ ಅದಕ್ಕೆ ಮಂತ್ರಶಕ್ತಿ ಬರುವುದು. ಎರಡಕ್ಷರಗಳ ಕಾಲುನೋವು ನಿವಾರಣಾ ಮಂತ್ರವನ್ನು ಎಂಟುಸಾವಿರ ಬಾರಿ ಏಕದಾಟಿಯಲ್ಲಿ ಜಪಿಸಿದರೆ ಅದು ಸಿದ್ಧಿಸಿ ಅದಕ್ಕೆ ಮಂತ್ರಶಕ್ತಿ ಸೇರಿಹೋಗುತ್ತದೆ. ಈ ವಿಧದಲ್ಲಿ ಒಂದೊಂದು ಮಂತ್ರಕ್ಕು ಒಂದೊಂದು ನಿಯಮವನ್ನು ಅದನ್ನು ತಯಾರು ಮಾಡಿದ ಕ್ರಮವನ್ನು ಅನುಸರಿಸಿ ಏರ್ಪಡಿಸಿರುವರು. ಮಂತ್ರವನ್ನು ಸೃಷ್ಠಿಸಿದವನು ಏರ್ಪಡಿಸಿದ ನಿಯಮವನ್ನು ಅನುಸರಿಸಿ ಮಂತ್ರೋಚ್ಛಾರಣೆ ಮಾಡಿದಾಗ ಅದು ಸಿದ್ಧಿ ಅಗುತ್ತದೆ. ಒಂದು ಔಷದಕ್ಕೆ ಶುದ್ಧಿ ಎಷ್ಟು ಅಗತ್ಯವೊ, ಹಾಗೆ ಒಂದು ಮಂತ್ರಕ್ಕು ಸಹ ಸಿದ್ಧಿ ಅಗತ್ಯ. ಶುದ್ಧಿ ಇಲ್ಲದ ಔಷಧ ಕೆಲಸ ಮಾಡದಹಾಗೆ, ಸಿದ್ಧಿಯಿಲ್ಲದ ಮಂತ್ರವು ಕೆಲಸಮಾಡುವುದಿಲ್ಲ. ಈ ವಿಧಾನವು ಈ ದಿನ ಪೂರ್ತಿಯಾಗಿ

ತಿಳಿಯದೆ ಹೋಗಿರುವುದರಿಂದ ಪೂರ್ವಕಾಲದ ಔಷಧಗಳಾಗಲಿ, ಪೂರ್ವ ಕಾಲದ ಮಂತ್ರಗಳಾಗಲಿ ಈ ದಿನ ಇಲ್ಲದೆ ಹೋಗಿವೆ.

ಒಬ್ಬ ಮಾಂತ್ರಿಕನು ಹಾವಿನ ವಿಷವನ್ನು ನಿವಾರಿಸುವ ಮಂತ್ರವನ್ನು ಕಲಿತು ನಿಯಮದ ಪ್ರಕಾರ ಸಿದ್ಧಿ ಹೊಂದಿದ್ದಾನೆಂದುಕೊಳ್ಳೋಣ. ಆ ಮಂತ್ರವನ್ನು ಸಿದ್ಧಿ ಹೊಂದಿದವನು ಸಿದ್ಧಿ ಹೊಂದಿದ ನಂತರ ಸಹ ಒಂದು ನಿಯಮವನ್ನು ಪಾಲಿಸಬೇಕಾಗಿರುತ್ತದೆ. ಒಂದು ಔಷಧವನ್ನು ತಯಾರು ಮಾಡಿ ಬಳಸಿದ ನಂತರ ಆ ಔಷಧಕ್ಕೆ ಒಂದು ಪತ್ಯವಿರುವುದಾಗಿ ಮರೆಯಬಾರದು. ಮಂತ್ರವನ್ನು ಸಿದ್ಧಿ ಹೊಂದಿದವನು ನಂತರ ಇರಬೇಕಾದ ನಿಯಮವನ್ನು ಮರೆಯಬಾರದು. ಹಾವಿನ ವಿಷವನ್ನು ನಿವಾರಿಸುವ ಮಂತ್ರಸಿದ್ಧಿ ಹೊಂದಿದವನು ನಂತರ ಯಾವ ವಿಷ ಸರ್ಪವನ್ನಾಗಲಿ, ಚೇಳನ್ನಾಗಲಿ ಸಾಯಿಸಬಾರದೆಂಬ ನಿಯಮವನ್ನು ಪಾಲಿಸಬೇಕು. ಹಾಗೆ ಪಾಲಿಸದೆ ಹೋದರೆ ಯಾವಾಗಲಾದರೂ ಚಿಕ್ಕ ಚೇಳನ್ನು ಸಾಯಿಸಿದರೂ ಆ ಮಂತ್ರಸಿದ್ಧಿ ರದ್ದಾಗಿ ಹೋಗಿ, ಆ ಮಂತ್ರವು ಪ್ರಯೋಜನ ವಿಲ್ಲದಾಗಿ ಹೋಗುತ್ತದೆ. ಈ ವಿಧ ನಿಯಮವನ್ನು ಪಾಲಿಸದ ಎಷ್ಟೋ ಜನ ಮಾಂತ್ರಿಕರು ಮಂತ್ರ ಬಲವನ್ನು ಕಳೆದುಕೊಂಡಿದ್ದೇವೆಂದು ತಿಳಿಯದೆ, ತಮ್ಮ ಮಂತ್ರವನ್ನು ಪ್ರಯೋಗಿಸಿ ಅದು ಕೆಲಸಮಾಡದಿದ್ದಾಗ ಅವಮಾನ ಪಾಲಾಗಿ ಹೋಗುವುದರಿಂದ, ಅದನ್ನು ನೋಡಿದ ನಂತರ ಅವರಿಗೂ ಸಹ ಮಂತ್ರಗಳ ಮೇಲೆ ಆಸಕ್ತಿಯಿಲ್ಲದೆ ಹೋಗುವುದರಿಂದ, ಈಗಿನ ಕಾಲದವರು ಸ್ಥೂಲ ವಿದ್ಯೆ ಓದುವುದರಿಂದ, ಸೂಕ್ಷ್ಮ ವಿದ್ಯೆಯನ್ನು ಯೋಚಿಸುವ ಬುದ್ಧಿ ಸಾಮರ್ಥ್ಯ ಇಲ್ಲದೆ ಹೋಗಿರುವುದರಿಂದ, ವಿಜ್ಞಾನವೆನ್ನುತ್ತಾ ಅಸಲಿಗೆ ಜ್ಞಾನವನ್ನೇ ಮರೆತು ಹೋಗಿರುವವರಿರುವುದರಿಂದ, ಪೂರ್ವಕಾಲದ ಚರಿತ್ರೆಯಲ್ಲಿ ಔಷಧಿಗಳು ಮಂತ್ರಗಳು ಎಂತಹ ಪಾತ್ರಗಳು ಪೋಷಿಸಿವೆಯೊ ತಿಳಿಯದ ಮನುಷ್ಯರಿರುವುದ ರಿಂದ, ಈ ದಿನ ಮಂತ್ರ ವಿದ್ಯೆಯನ್ನು ಬೋಧಿಸುವವರಾಗಲಿ, ಮಂತ್ರವಿದ್ಯೆಯನ್ನು ಅಭ್ಯಸಿಸುವವರಾಗಲಿ ಇಲ್ಲದೆ ಹೋಗಿದ್ದಾರೆ.

ಮನುಷ್ಯರಲ್ಲಿ ವಿಶ್ವಾಸಿಗರು, ಅವಿಶ್ವಾಸಿಗರು ಎಂಬ ಎರಡು ವಿಧಗಳ ಮನುಷ್ಯರಿದ್ದಾರೆ. ವಿಶ್ವಾಸಿಗಳಲ್ಲಿ ಜ್ಞಾನ ವಿಶ್ವಾಸಿಗಳು, ಮೂಢ ವಿಶ್ವಾಸಿಗಳು ಎಂದು ಎರಡು ವಿಧಗಳವರಿರುವಾಗ, ಅವಿಶ್ವಾಸಿಗಳಲ್ಲಿ ಸಹ ಒಂದು ವಿಷಯವನ್ನು ಎಲ್ಲಾ ವಿಧಗಳಲ್ಲಿ ನೋಡಿದ ನಂತರ ಅದರಲ್ಲಿ ನಂಬಬೇಕಾಗಿರು ವುದು ಇಲ್ಲದಿರುವಾಗ ಪದ್ಧತಿಯಾಗಿ ನಂಬದವರು ಕೆಲವರಿರುವಾಗ, ಒಂದು ವಿಷಯವನ್ನು ಪೂರ್ತಿಯಾಗಿ ನೋಡದ ಮೊದಲೆ, ಅದರಲ್ಲಿ ನಂಬಬೇಕಾಗಿರು ವುದು ಇದೆಯೊ ಇಲ್ಲವೊ ಗ್ರಹಿಸುವುದಕ್ಕಿಂತ ಮೊದಲೇ, ಮೂರ್ಖವಾಗಿ ನಂಬದ ಮೂಢ ಅವಿಶ್ವಾಸಿಗಳು ಕೆಲವರಿದ್ದಾರೆ. ಅಂತವರಲ್ಲಿ ಪದ್ಧತಿಯಾಗಿ ನಂಬದವರನ್ನು ಹೇತುವಾದಿಗಳೆಂದು, ಮೂಢ ಅವಿಶ್ವಾಸಿಗಳನ್ನು ನಾಸ್ತಿಕವಾದಿ ಗಳೆಂದು ಅನ್ನಬಹುದು. ಒಂದು ಪದ್ಧತಿಯನ್ನು ಅನುಸರಿಸಿ ಅವರ ಪ್ರಶ್ನೆಗೆ ಉತ್ತರವಿಲ್ಲದಿರುವಾಗ ಒಂದು ವಿಷಯವನ್ನು ನಂಬದ ಹೇತುವಾದಿಗಳನ್ನು ಒಪ್ಪಿಕೊಳ್ಳಬಹುದು. ಆದರೆ ಯಾವ ಪದ್ಧತಿ ಇಲ್ಲದೆ ಮೂರ್ಖವಾಗಿ ನಂಬದ ನಾಸ್ತಿಕರನ್ನು ನಾವು ಕೂಡ ಒಪ್ಪಿಕೊಳ್ಳುವುದಿಲ್ಲ. ಯಾವ ವಿಧದಲ್ಲಿ ವಿಶ್ವಾಸಿಗಳಲ್ಲಿ ಮೂಢ ನಂಬಿಕೆಯಿರುವವರಿದ್ದಾರೋ, ಅದೇ ವಿಧದಲ್ಲಿ ಅವಿಶ್ವಾಸಿಗಳಲ್ಲಿ ಮೂಢ ಅವಿಶ್ವಾಸಿಗಳು (ನಾಸ್ತಿಕರು) ಸಹ ಇದ್ದಾರೆಂದು ಹೇಳುತ್ತಿದ್ದೇವೆ. ನಾಸ್ತಿಕರು ಮೂರ್ಖರಾಗಿ ವಾದಿಸುವವರಾಗಿರುವುದರಿಂದ ಅವರಿಗೆ ಉತ್ತರ ಹೇಳದಿದ್ದರೂ ಫರವಾಗಿಲ್ಲ. ಆದರೆ ಹೇತುವಾದಿಗಳ ಪ್ರಶ್ನೆಗಳಿಗೆ ತಪ್ಪದೆ ಉತ್ತರ ಹೇಳಬೇ ಕಾಗಿರುತ್ತದೆ. ಹಾಗೆ ಹೇಳದಿರುವಾಗ ಆ ವಿಷಯವನ್ನು ಕುರಿತು ಮೊದಲನೆಯವನಿಗೆ ತಿಳಿಯದೆಂದು ಹೇಳಬಹುದು. ಮೊದಲನೆಯವನಿಗೇ ಅದನ್ನು ಕುರಿತು ಪೂರ್ತಿಯಾಗಿ ತಿಳಿಯದಿರುವಾಗ ಆ ವಿಷಯ ಎರಡನೆಯವನಿಗೆ ತಿಳಿಯದೆ ಹೋಗುವುದಕ್ಕೆ ಅವಕಾಶವಿದೆ. ಮಂತ್ರಗಳ ವಿಷಯಗಳಲ್ಲಿ ಸರಿಯಾಗಿ ಅದೇ ನಡೆದಿದೆಯೆಂದು ಹೇಳಬಹುದು. ಒಬ್ಬ ಮಾಂತ್ರಿಕನು ಮಂತ್ರವನ್ನು ಕುರಿತು ಪೂರ್ತಿಯಾಗಿ ತಿಳಿಯದಿರುವಾಗ ಎರಡನೆಯವನು ಪ್ರಶ್ನಿಸಿದ ಪ್ರಶ್ನೆಗೆ ಉತ್ತರ ಹೇಳದೆ ಹೋಗುವನು. ಹಾಗಿರುವಾಗ ಹೇತುವಾದಿಗಳು ಮಂತ್ರಗಳನ್ನು ಕುರಿತಾಗಲಿ, ಮಾಂತ್ರಿಕರನ್ನು ಕುರಿತಾಗಲಿ

ನಂಬುವುದಿಲ್ಲ. ನಂಬದೆ ಹೋಗುವುದಲ್ಲದೆ ನಮ್ಮ ಪ್ರಶ್ನೆಗೆ ಉತ್ತರವಿಲ್ಲವೆಂದು ಹೇಳುವುದರಿಂದ ಆ ವಿಷಯವು ಉತ್ತರವಿಲ್ಲದ್ದೆಂದು ಎಲ್ಲರಿಗೂ ತಿಳಿದುಹೋಗುತ್ತದೆ. ಆಗಿರುವಾಗ ಆ ವಿಷಯವು ಪೂರ್ತಿಯಾಗಿ ಇಲ್ಲದೆ ಹೋಗುವುದಕ್ಕೆ ಅವಕಾಶವಿದೆ. ಮಂತ್ರಗಳ ವಿಷಯದಲ್ಲಿ ಈದಿನ ಹೇತುವಾದಿಗಳ ಪ್ರಶ್ನೆಗಳಿಗೆ ಉತ್ತರ ಇಲ್ಲದೆ ಹೋಗುವುದರಿಂದ, ಅದನ್ನು ನಂಬುವಂತಹ ವಿಷಯವಲ್ಲವೆಂದು ಹೇತುವಾದಿಗಳು ಹೇಳುವುದರಿಂದ, ಈ ದಿನ ಮಂತ್ರವಿದ್ಯೆ ತಳಹತ್ತಿಹೋಗಿ ಯಾರಿಗೂ ತಿಳಿಯದ ಸ್ಥಿತಿಗೆ ಸೇರಿಕೊಂಡಿದೆ.

ಮಂತ್ರವಿದ್ಯೆ ಸತ್ಯವಾದಾಗ ಮಂತ್ರಗಾರನು ಉತ್ತರ ಹೇಳದ ಸ್ಥಿತಿಯಲ್ಲಿ ಏಕಿದ್ದಾನೆ? ಎಂಬ ಪ್ರಶ್ನೆ ಯಾರಿಗಾದರೂ ಬರುತ್ತದೆ. ಇಂತಹ ಪ್ರಶ್ನೆಯಿಂದ ಮಂತ್ರವಿದ್ಯೆ ಶಾಸ್ತ್ರಬದ್ಧವಾದುದಲ್ಲವೆ? ಮಂತ್ರ ವಿದ್ಯೆ ಸತ್ಯವಾದಾಗ ಅದರಲ್ಲಿ ಶಾಸ್ತ್ರೀಯತೆ ಇಲ್ಲದೆ ಹೋಗುವುದಕ್ಕೆ ಅವಕಾಶವೆ ಇರುವುದಿಲ್ಲ ಅಲ್ಲವೆ? ಹಾಗಿರುವಾಗ ಇತರರು ಕೇಳಿದ ಪ್ರಶ್ನೆಗೆ ಉತ್ತರ ಏಕಿಲ್ಲ? ಉತ್ತರ ಹೇಳದ ಸ್ಥಿತಿಗೆ ಏಕೆ ಬಂದಿದೆ? ಎಂದು ಸತ್ಯಾನ್ವೇಷಿಗಳಿಗೆ ಪ್ರಶ್ನೆ ಬಾರದೆ ಇರುವುದಿಲ್ಲ. ಅಂತಹ ಸ್ಥಿತಿ ಏಕೆ ಬಂದಿದೆಯೊ ನಾವು ಹೇಳಿಕೊಳ್ಳೋಣ. ಒಬ್ಬ ಮಾಂತ್ರಿಕನು ಹಾವಿನ ಕಡಿತಕ್ಕೆ ತನ್ನ ಮಂತ್ರದಿಂದ ಹಾವು ವಿಷವನ್ನು ನಿವಾರಿಸುತ್ತಿದ್ದಾನೆಂದು, ಹಾವು ಕಡಿತಕ್ಕೆ ಗುರಿಯಾದವರು ಯಾರೂ ಆತನ ಹತ್ತಿರಕ್ಕೆ ಹೋದ ನಂತರ ಸತ್ತುಹೋಗಿಲ್ಲವೆಂದು ಹೇಳಿಕೊಳ್ಳುವುದನ್ನು ಕೇಳಿದ ಒಬ್ಬವ್ಯಕ್ತಿ ತಾನು ಸಹ ಮಂತ್ರವಿದ್ಯೆಯನ್ನು ಕಲಿಯಬೇಕೆಂದುಕೊಂಡಿದ್ದಾನೆ. ಆಗ ಆ ವ್ಯಕ್ತಿ ಹಾವು ವಿಷನಿವಾರಣೆ ಮಂತ್ರವನ್ನು ಕಲಿತ ಸರ್ಪಮಾಂತ್ರಿಕನ ಹತ್ತಿರಕ್ಕೆ ಹೋಗಿ ತಾನು ಮಂತ್ರವಿದ್ಯೆಯನ್ನು ತಮ್ಮ ಹತ್ತಿರ ಕಲಿಯಬೇಕೆಂದು ಬಂದಿದ್ದೇನೆಂದು ಹೇಳಿದನು. ಆ ಮಾತು ಕೇಳಿದ ಸರ್ಪಮಾಂತ್ರಿಕನು ತನ್ನ ವಿದ್ಯೆಯನ್ನು ಕಲಿತುಕೊಳ್ಳಬೇಕೆಂದು ಬಂದವನಿಗೆ ಕಲಿಸಬೇಕೆಂದುಕೊಳ್ಳುತ್ತಾನೆ. ಹಾವು ವಿಷ ನಿವಾರಣೆ ಮಂತ್ರವನ್ನು ಕಲಿತುಕೊಳ್ಳಬೇಕೆಂದುಕೊಂಡವನು, ತನಗೆ ಮಂತ್ರವಿದ್ಯೆಯನ್ನು ಕಲಿಸುವ ವ್ಯಕ್ತಿ ತನ್ನ ಮಂತ್ರವನ್ನು ಉಪಯೋಗಿಸಿ, ಹಾವಿನ ಕಡಿತಕ್ಕೆ ಗುರಿಯಾದ ಒಬ್ಬ

ಮನುಷ್ಯನಿಗೆ ವೈದ್ಯ ಮಾಡುವುದನ್ನು ಪ್ರತ್ಯಕ್ಷವಾಗಿ ನೋಡಿದನು. ಹಾಗೆ ಪ್ರತ್ಯಕ್ಷವಾಗಿ ನೋಡಿದಾಗ ವಿದ್ಯಾರ್ಥಿಯಾದ ವ್ಯಕ್ತಿಗೆ ಎಷ್ಟೋ ಪ್ರಶ್ನೆಗಳು ಬಂದಿವೆ. ಆ ಪ್ರಶ್ನೆಗಳನ್ನು ಒಂದೊಂದಾಗಿ ಗುರುವಾಗಿರುವ ಮಾಂತ್ರಿಕನನ್ನು ಕೇಳುತ್ತಾನೆ.

**ವಿದ್ಯಾರ್ಥಿ :–** ಗುರುಗಳೆ ನೀವು ಹಾವಿನ ಕಡಿತಕ್ಕೆ ಗುರಿಯಾದ ಮನುಷ್ಯನ ಮುಂದೆ ಕುಳಿತುಕೊಂಡು, ಮಂತ್ರವನ್ನು ಕೆಲವು ಬಾರಿ ಜಪಿಸಿ ಬಾಯಿಯಿಂದ ಗಾಳಿಯನ್ನು ಆತನ ಮೇಲೆ ಊದಿದ್ದೀರ. ಅಷ್ಟಲ್ಲದೆ ನೀವು ಏನೂ ಮಾಡಲಿಲ್ಲ. ಮಂತ್ರವನ್ನು ಜಪಿಸಿ ಗಾಳಿಯನ್ನು ಊದಿದರೆ, ಆಗ ತಮ್ಮ ಮಂತ್ರ ಯಾವ ವಿಧದಲ್ಲಿ ಕೆಲಸ ಮಾಡಿ ಎದುರಿಗೆ ಕುಳಿತವನ ಶರೀರದಲ್ಲಿ ವಿಷವನ್ನು ಚೇದಿಸಿದೆ? ನೀವು ಮಂತ್ರವನ್ನು ಎಷ್ಟುಬಾರಿ ಜಪಿಸುತ್ತಿದ್ದೀರಾ?

**ಮಾಂತ್ರಿಕನು :–** ಹಾವಿನ ವಿಷನಿವಾರಣೆ ಮಂತ್ರವನ್ನು ಮೊದಲು ಸಿದ್ಧಿ ಹೊಂದಿದಾಗಿನಿಂದ ನಾನು ಕೆಲವು ನೂರು ಜನರಿಗೆ ಮಂತ್ರವನ್ನು ಉಪಯೋಗಿಸಿ ಕಾಪಾಡಿದ್ದೇನೆ. ಹಾವಿನ ಕಡಿತಕ್ಕೆ ಗುರಿಯಾದವನು ಬಂದಾಗ ಸಿದ್ಧಿ ಹೊಂದಿದ ಮಂತ್ರವನ್ನು ಹನ್ನೊಂದು ಬಾರಿ ಜಪಿಸಿ ಆತನ ಮೇಲೆ ಊದುವುದು ನಡೆಯುತ್ತದೆ. ಹಾಗೆ ಮಂತ್ರವನ್ನು ಜಪಿಸಿ ಊದುವುದರಿಂದ ಎದುರಿನ ವ್ಯಕ್ತಿಯಲ್ಲಿನ ವಿಷವೆಲ್ಲವೂ ಕೆಲಸ ಮಾಡದೆ ಆ ವ್ಯಕ್ತಿ ಬದುಕುತ್ತಿದ್ದಾನೆ.

**ವಿದ್ಯಾರ್ಥಿ :–** ಮಂತ್ರವನ್ನು ಸಿದ್ಧಿ ಹೊಂದುವುದು ಎಂದರೆ ಏನು?

**ಮಾಂತ್ರಿಕನು :–** ಪ್ರತಿ ಮಂತ್ರಕ್ಕು ಒಂದು ನಿಯಮವಿರುತ್ತದೆ. ಹಾಗೆ ಹಾವಿನ ಮಂತ್ರಕ್ಕು ಸಹ ನಿಯಮವಿದೆ. ಆ ನಿಯಮದ ಪ್ರಕಾರ ಹಾವಿನ ಮಂತ್ರ ವಿಷವನ್ನು ಚೇದಿಸುವ ಶಕ್ತಿ ಹೊಂದಬೇಕೆಂದರೆ ಅದಕ್ಕೆ ಸಿದ್ಧಿ ಅವಶ್ಯ. ಹಾವಿನ ಮಂತ್ರಗಳು ಎಷ್ಟೋ ಇವೆ. ಅವುಗಳಲ್ಲಿ ನಾನು ಸಿದ್ಧಿ ಹೊಂದಿದ ಮಂತ್ರವು ಏಳು ಬೀಜಾಕ್ಷರಗಳ ಮಂತ್ರ. ಅದರಲ್ಲಿ ಒಂದು "ಶ್ರೀಂ", ನಾಲ್ಕು "ಹ್ರೀಂ"ಗಳು ಎರಡು "ಕ್ಲೀಂ"ಗಳು ಇವೆ. ಏಳು ಬೀಜಾಕ್ಷರಗಳ ಮಂತ್ರವನ್ನು ಏಳು ಸಾವಿರ ಮೊದಲನೇ ದಿನ, ನಾಲ್ಕು ಸಾವಿರ ಎರಡನೇ ದಿನ, ಒಂದು ಸಾವಿರ ಮೂರನೇ

ದಿನ ಜಪಿಸಬೇಕು. ನಾನು ಹಾಗೆ ಮೂರು ದಿನಗಳು ಜಪಿಸಿ ಸಿದ್ಧಿ ಹೊಂದಿದ್ದೇನೆ. ಸಿದ್ಧಿ ಹೊಂದಿದ ನಂತರ ಹಾವಿನ ಕಡಿತಕ್ಕೆ ಗುರಿಯಾದವನನ್ನು ರಕ್ಷಿಸುವುದಕ್ಕೆ ಮಂತ್ರವನ್ನು ಹನ್ನೊಂದು ಬಾರಿ ಜಪಿಸಿಕೊಂಡರೆ ಆ ಮಂತ್ರಶಕ್ತಿ ಉತ್ತೇಜ ಹೊಂದುವುದು. ನಂತರ ಹಾವಿನ ಕಡಿತಕ್ಕೆ ಗುರಿಯಾದವನ ಮೇಲೆ ಗಾಳಿಯನ್ನು ಊದಿದಾಗ ಕೆಲವು ನಿಮಿಷಗಳಲ್ಲಿಯೆ ಆ ವ್ಯಕ್ತಿಯಲ್ಲಿನ ವಿಷ ಕೆಲಸ ಮಾಡದೆ ವ್ಯರ್ಥವಾಗಿ ಹೋಗುತ್ತದೆ.

**ವಿದ್ಯಾರ್ಥಿ :–** ಮಂತ್ರ ಸಿದ್ಧಿ ಯಾಗುವುದು ಅರ್ಥವಾಗಿದೆ. ನಂತರ ಅಗತ್ಯವಿದ್ದಾಗ ಹನ್ನೊಂದು ಬಾರಿ ಮಂತ್ರವನ್ನು ಪಠಿಸಿದರೆ ಅದು ಚುರುಕುತನ ಹೊಂದುವುದು ಅರ್ಥವಾಗಿದೆ. ಪುನಃ ಹನ್ನೊಂದು ಬಾರಿ ಜಪಿಸಿದಾಗ ಉತ್ತೇಜವಾದ ಮಂತ್ರ ಎದುರಿನ ಮನುಷ್ಯನಲ್ಲಿನ ವಿಷದ ಮೇಲೆ ಹೇಗೆ ಕೆಲಸ ಮಾಡಿದೆಯೊ ನನಗೆ ಅರ್ಥವಾಗಲಿಲ್ಲ. ಆ ವಿಷಯವನ್ನು ಕುರಿತು ವಿವರವಾಗಿ ಹೇಳಿರಿ.

**ಮಾಂತ್ರಿಕನು :–** ಮಂತ್ರವನ್ನು ಓದಿ ಊದಬೇಕೆಂದು ನನಗೆ ಮಂತ್ರವನ್ನು ಕಲಿಸಿದವರು ಹೇಳಿದ್ದಾರೆ. ಹಾಗೇ ನಾನು ಮಾಡುತ್ತಿದ್ದೇನೆ, ನಂತರ ಏನು ನಡೆಯುತ್ತದೊ, ಹೇಗೆ ನಡೆಯುತ್ತದೊ ತಿಳಿಯದು. ಆದರೆ ಎದುರಿಗಿರುವ ಮನುಷ್ಯನಲ್ಲಿನ ಹಾವಿನ ವಿಷ ಇಲ್ಲದೇ ಹೋಗುತ್ತದೆ.

**ವಿದ್ಯಾರ್ಥಿ :–** ಮಂತ್ರದಲ್ಲಿನ ಶಕ್ತಿ ಎದುರಿಗಿರುವ ಮನುಷ್ಯನ ಮೇಲೆ ಹೇಗೆ ಕೆಲಸ ಮಾಡಿರುವುದು ತಿಳಿಯದಿರುವಾಗ, ಆ ಮಂತ್ರ ಯಾವಾಗಾದರೂ ಕೆಲಸ ಮಾಡದೆ ಹೋದರೆ ಅದನ್ನು ಹೇಗೆ ಕೆಲಸಮಾಡಿಸಬೇಕೊ ತಿಳಿಯದೆ ಹೋಗುತ್ತದೆ ಅಲ್ಲವೆ! ಹಾಗೆ ಮಂತ್ರದಲ್ಲಿನ ಶಕ್ತಿ ಹೇಗಿರುತ್ತದೊ? ಅದು ಹೇಗೆ ಕೆಲಸ ಮಾಡುತ್ತದೊ ತಿಳಿದುಕೊಳ್ಳಬೇಕಾಗಿದೆ.

**ಮಾಂತ್ರಿಕನು :–** ಮಂತ್ರವನ್ನು ಸಿದ್ಧಿ ಮಾಡಿಕೊಳ್ಳುವುದು, ನಂತರ ಅದನ್ನು ಬಳಸುವುದು ತಿಳಿದಿದೆ, ಆದರೆ ಮಂತ್ರಶಕ್ತಿ ಹೇಗಿರುತ್ತದೊ, ಅದು ಹೇಗೆ ಕೆಲಸ ಮಾಡುತ್ತದೊ ನನಗೆ ತಿಳಿಯದು. ಅದು ಕೆಲಸ ಮಾಡದಿರುವಾಗ

ಅದನ್ನು ಪುನಃ ಹೇಗೆ ಕೆಲಸ ಮಾಡಿಸಬೇಕೊ ಸಹ ತಿಳಿಯದು. ನನಗೆ ಈ ಮಂತ್ರವನ್ನು ಕಲಿಸಿದವರು ವಿಷಯಗಳೆಲ್ಲವನ್ನು ಪೂರ್ತಿ ವಿವರವಾಗಿ ಹೇಳಲಿಲ್ಲ.

**ವಿದ್ಯಾರ್ಥಿ :–** ಒಂದು ಮಂತ್ರವನ್ನು ಕುರಿತು ಸಮಗ್ರವಾಗಿ ತಿಳಿಯಬೇಕೆಂದರೆ ಯಾರ ಹತ್ತಿರಕ್ಕೆ ಹೋಗಿ ಕೇಳಬೇಕು?

**ಮಾಂತ್ರಿಕನು :–** ನನಗೆ ಮಂತ್ರವನ್ನು ಕಲಿಸಿದ ವ್ಯಕ್ತಿಗೂ ಸಹ ಈ ವಿಷಯಗಳೆಲ್ಲವು ಪೂರ್ತಿಯಾಗಿ ತಿಳಿದಿಲ್ಲ. ಆದರೆ ಆತನು ಒಂದು ಮಾತು ಹೇಳುತ್ತಿದ್ದನು. ಮಂತ್ರಗಳೂ, ಅವುಗಳ ಶಕ್ತಿಗಳೂ, ಅವುಗಳ ಕೆಲಸ ಎಲ್ಲಾ ಸೂಕ್ಷ್ಮವಾಗಿಯೇ ಇರುತ್ತವೆ. ಸೂಕ್ಷ್ಮ ವಿಷಯಗಳು ಒಬ್ಬ ಯೋಗಿಗಳಿಗೆ ಹೊರತು ಯಾರಿಗೂ ತಿಳಿಯುವುದಿಲ್ಲವೆಂದು ಅನ್ನುತ್ತಿದ್ದನು.

ಈ ವಿಧದಲ್ಲಿ ನಡೆದ ಅವರ ಸಂಭಾಷಣೆಯಲ್ಲಿ ಮಂತ್ರಗಳ ವಿಷಯಗಳು ಯೋಗಿಗಳಿಗೆ ತಿಳಿದಿರುತ್ತದೆಂದು ತಿಳಿಯಿತು. ನಾವೂ ಸಹ ದೈವಶಕ್ತಿಯಿರುವವರೆ ಮಂತ್ರಶಕ್ತಿಯನ್ನು ತಯಾರುಮಾಡಬಲ್ಲವರೆಂದು ಹೇಳಿದ್ದೇವೆ. ಮಂತ್ರಶಕ್ತಿಯನ್ನು ಸೃಷ್ಟಿಸುವವರಿಗೆ ಮಂತ್ರಗಳ ಸೂಕ್ಷ್ಮತೆ ಎಲ್ಲಾ ತಿಳಿಯುತ್ತದೆ. ಈಗ ಅವರಿಗೆ ಸಿಗದ ಉತ್ತರಗಳನ್ನು ಕುರಿತು ನಾವು ತಿಳಿದುಕೊಳ್ಳೋಣ. ಅವರು ಹಾವಿನ ವಿಷವನ್ನು ನಿವಾರಿಸುವ ಮಂತ್ರವನ್ನು ಕುರಿತು ಪ್ರಶ್ನಿಸಿಕೊಂಡಿದ್ದಾರೆ. ಅಂತಹುದೆ ಆದ ಚೇಳಿನ ವಿಷವನ್ನು ಕುರಿತು ಪೂರ್ತಿ ವಿವರವಾಗಿ ತಿಳಿದುಕೊಳ್ಳೋಣ. ಇದನ್ನನುಸರಿಸಿ ನೋಡಿದರೆ ಮಂತ್ರಗಳ ಸೂಕ್ಷ್ಮತೆ ಎಲ್ಲಾ ತಿಳಿದು ಹೋಗುತ್ತದೆ. ನನ್ನ ಅನುಭವದಲ್ಲಿ ಚೇಳಿನ ವಿಷ ನಿವಾರಣೆ ಮಂತ್ರವನ್ನು ನೋಡಿದ್ದೇನೆ. ಮಂತ್ರ ಪ್ರಾರಂಭವಾಗುವಾಗ ದೈವ ಸಂಬಂಧವಾದ "ಓಂ" ಇರುತ್ತದೆ. ಕೊನೆಯಲ್ಲಿ ಮಂತ್ರ ಮುಗಿಯುವಾಗ ಎಂದಿಗಾದರೂ ಅಂತ್ಯವಾಗಿ ಹೋಗುವ ಕ್ಷರನಾದ ಜೀವಾತ್ಮನ ಗುರುತಾಗಿ "ಸ್ವಾಹಾಃ" ಇರುತ್ತದೆ. ಸೃಷ್ಟಿಯನ್ನು ಪ್ರಾರಂಭಿಸಿದ ದೈವದವೊಂದು ಗುರುತು ಓಂ ಮೊದಲು ಇರುತ್ತದೆ, ಅಂತ್ಯವಾಗಿ ಹೋಗುವ ಕ್ಷರನಾದ ಜೀವಾತ್ಮನ ಗುರುತಾಗಿ ಸ್ವಾಹಾಃ ಕೊನೆಯದಲ್ಲಿದ್ದರೆ ಮಧ್ಯೆದಲ್ಲಿರು

ವಂತವುಗಳೆಲ್ಲಾ ಆತ್ಮ ಶಕ್ತಿಗೆ ಸಂಬಂಧಿಸಿದ ಗುರುತಾಗಿ ಬೀಜಾಕ್ಷರಗಳಿರುತ್ತವೆ. ಇದರ ಪ್ರಕಾರ ಚೇಳಿನ ಮಂತ್ರದಲ್ಲಿ ಪರಮಾತ್ಮ, ಆತ್ಮ, ಜೀವಾತ್ಮಗಳ ತ್ರೈತಸಿದ್ಧಾಂತ ಅಡಗಿದೆ. ಚೇಳಿನ ಮಂತ್ರ ಓಂ ಚಹ್ ಫಟ್ ಸ್ವಾಹಾ ಎಂದು ಇದ್ದರೆ ಅದರಲ್ಲಿ (ಓಂ) (ಚಹ್‌ಫಟ್) (ಸ್ವಾಹಾಃ) ಎನ್ನುವ ಮೂರು ಭಾಗಗಳಿವೆ. ಯಾವ ಮಂತ್ರದಲ್ಲಾದರೂ ಓಂ ಗೂ ಸ್ವಾಹಾ ಗೂ ಮಧ್ಯೆದಲ್ಲಿರುವಂಥದ್ದೆಲ್ಲಾ ಒಂದು ಭಾಗವಾಗಿ ಗುರ್ತಿಸಬೇಕು. ಮಂತ್ರದಲ್ಲಿ ಈ ಕಡೆ ಮೊದಲನೆಯದಾದ ಪರಮಾತ್ಮ, ಆಕಡೆ ಕೊನೆಯದಾದ ಜೀವಾತ್ಮ ಎರಡೂ ಏನು ಮಾಡುವಂತವುಗಳಲ್ಲ. ಇವೆರಡು ನೋಡುವುದಕ್ಕೆ ಇರುವವು ಮಾತ್ರ. ಜಗತ್ತಿನಲ್ಲಿ ಒಟ್ಟಾರೆ ಎಲ್ಲರನ್ನು ಆಡಿಸುವುದು ಆತ್ಮ ಮಾತ್ರ. ಆದ್ದರಿಂದ ಆತ್ಮಶಕ್ತಿ ಮಧ್ಯದಲ್ಲಿರುವ ಅಕ್ಷರಗಳಲ್ಲಿ ಒಳಗೊಂಡಿರುತ್ತದೆ. ಮಂತ್ರ ಸಿದ್ಧಿಯಾದಾಗ ಆತ್ಮಶಕ್ತಿ ಮಂತ್ರಶಕ್ತಿಯಾಗಿ ಬದಲಾಗಿ ಅಲ್ಲಿ ಏನು ಮಾಡಬೇಕೊ ಅದನ್ನೇ ಮಾಡುತ್ತದೆ. ಒಂದು ಮಂತ್ರವು ತ್ರೈತ ಸಿದ್ಧಾಂತವನ್ನು ಹೊಂದಿದೆಯೆಂದರೆ, ಅದು ಮೂರು ಆತ್ಮಗಳು ಸೇರಿರುವ ಸಜೀವ ಶಕ್ತಿಯೇ ಇರಬೇಕು. ಆದ್ದರಿಂದ ಮಂತ್ರ ಸಿದ್ಧಿಸಿದಾಗ ಖಗೋಳದಲ್ಲಿನ ಆ ಮಂತ್ರಕ್ಕೆ ಸರಿಹೋಗುವ ಗ್ರಹ ಬಂದು ಮಾಂತ್ರಿಕನಲ್ಲಿ ಸೇರಿಹೋಗುತ್ತದೆ. ಬಂದ ಗ್ರಹವು ಸಜೀವವಾಗಿರುವುದ ರಿಂದ ಅದರಲ್ಲಿ ಜೀವಾತ್ಮ, ಆತ್ಮ, ಪರಮಾತ್ಮ ಮೂರು ಇವೆಯೆಂದು ತಿಳಿಯಬೇಕು.

ಚೇಳಿನ ಮಂತ್ರದಲ್ಲಿ ಮೊದಲ ಓಂ ಅನ್ನು ಕೊನೆಯ ಸ್ವಾಹಾವನ್ನು ತೆಗೆದು ಹಾಕಿದರೆ (ಓಂ) ಚಹ್‌ಫಟ್ (ಸ್ವಾಹಾ) ಮಧ್ಯದಲ್ಲಿ ಚಹ್‌ಫಟ್ ಎನ್ನುವ ಶಬ್ಧವು ಮಾತ್ರ ಉಳಿಯುತ್ತದೆ. ಮಂತ್ರವನ್ನು ಸೃಷ್ಠಿಸಿದವರ ದೃಷ್ಠಿಯಲ್ಲಿ ಚಹ್ ಎಂದರೆ ಚೇಳಿನ ವಿಷ. ಫಟ್ ಎಂದರೆ ಹೊಡೆದು ಹೋಗುವುದು, ಇಲ್ಲದೆ ಹೋಗುವುದು, ನಾಶನವಾಗಿ ಹೋಗುವುದೆಂದು ಅರ್ಥ. ಚಹ್‌ಫಟ್ ಎಂದರೆ ವಿಷ ಇಲ್ಲದೆ ಹೋಗುವುದೆಂದು ಅರ್ಥ. ವಿಷವಿಲ್ಲದೆ ಹೋಗುವುದು ಎನ್ನುವ ಕಾರ್ಯವನ್ನು ಮಾಡುವುದು ಆತ್ಮ ಮಾತ್ರವೆ. ಪರಮಾತ್ಮ, ಜೀವಾತ್ಮ ಎರಡು ಯಾವ ಕೆಲಸವನ್ನು ಮಾಡುವಂತಹವುಗಳಲ್ಲ ಎನ್ನುವ ವಿಷಯವನ್ನು ಜ್ಞಾಪಕದಲ್ಲಿ

ಇಟ್ಟುಕೊಳ್ಳಬೇಕು. ಯಾವ ಕೆಲಸ ಮಾಡಬೇಕಾಗಿರುವುದು ಮಂತ್ರದ ಮಧ್ಯದಲ್ಲಿದೆ. ಆ ಮಂತ್ರಕ್ಕೆ ಅಧಿಪತಿಯಾಗಿ ಬಂದಿರುವ ಗ್ರಹದಲ್ಲಿನ ಆತ್ಮಶಕ್ತಿ ಮಂತ್ರಶಕ್ತಿಯಾಗಿ ಬದಲಾಗಿ ಚೇಳಿನ ವಿಷವನ್ನು ಇಲ್ಲದ ಹಾಗೆ ಮಾಡುತ್ತದೆ. ಚೇಳಿನ ಮಂತ್ರವನ್ನು ತಯಾರು ಮಾಡಿದವರು, ಆ ಮಂತ್ರ ಸಿದ್ಧಿಸುವುದಕ್ಕೆ ಹತ್ತು ಸಾವಿರ ಬಾರಿ ಜಪಿಸಬೇಕೆಂಬ ನಿಯಮವನ್ನು ಇಟ್ಟಿದ್ದಾರೆ. ಹಾಗೆ ಜಪಿಸಿದವರಿಗೆ ಆ ಮಂತ್ರ ಸಿದ್ಧಿಸುತ್ತದೆ. ಸಿದ್ಧಿಸಿದ ಮಂತ್ರವನ್ನು ಅಗತ್ಯವಿರುವಾಗ ಬಳಸಿಕೊಳ್ಳುವುದಕ್ಕೆ ಆ ಮಂತ್ರವನ್ನು ಒಂಬತ್ತು ಅಥವಾ ಹದಿನೆಂಟು ಬಾರಿ ಜಪಿಸಬೇಕು. ಆಗ ಚೇಳಿನ ವಿಷದಿಂದ ನೋವು ಪಡುವವರಿಗೆ ಆ ಮಂತ್ರ ಶಕ್ತಿಯನ್ನು ಉಪಯೋಗಿಸಬಹುದು. ಮಂತ್ರವನ್ನು ಒಂಭತ್ತು ಬಾರಿ ಜಪಿಸಿ ಗ್ಲಾಸಿನೊಳಗಿನ ನೀರಿನೊಳಗೆ ಮಂತ್ರಶಕ್ತಿ ಹೋಗಬೇಕೆಂದು ಸಂಕಲ್ಪಿಸಿಕೊಂಡರೆ ಆಗ ಮಂತ್ರಶಕ್ತಿಯಾಗಿರುವ ಗ್ರಹವು ನೀರಿನೊಳಗೆ ಪ್ರವೇಶಿಸುತ್ತದೆ. ಆ ನೀರನ್ನು ಚೇಳಿನ ವಿಷದಿಂದ ನೋವುಪಡುವವನಿಗೆ ಕುಡಿಸಿದಾಗ ನೀರಿನಲ್ಲಿನ ಮಂತ್ರಗ್ರಹವು ಅವನ ಶರೀರದೊಳಗೆ ಪ್ರವೇಶಿಸಿ, ಚೇಳು ವಿಷ ಬಾಧೆ ಇರುವ ಶರೀರ ಭಾಗದೊಳಗೆ ಹೋಗಿ ಆ ವಿಷವನ್ನು ನಿರ್ವೀರ್ಯ ಮಾಡುವುದು. ನೀರನ್ನು ಕುಡಿದ ಎರಡು ಮೂರು ನಿಮಿಷಗಳಲ್ಲಿ ಆ ಕೆಲಸವೆಲ್ಲಾ ನಡೆದುಹೋಗಿ ವಿಷದ ಬಾಧೆ ಇಲ್ಲದೆ ಹೋಗುವುದು.

ಇದೇನೋ ಕಟ್ಟುಕಥೆಯಂತೆ ಇದೆ, ನಂಬಲಿಕ್ಕಾಗುವುದಿಲ್ಲವೆಂದು ಯಾರಾದರೂ ಅ ನ್ನಬಹುದು. ಏಕೆಂದರೆ ಮಾಂತ್ರಿಕನಿಗೂ ಸಹ ತಿಳಿಯದಿರುವುದು, ಯಾರ ಕಣ್ಣಿಗೆ ಕಾಣಿಸದಿರುವುದನ್ನು ಹೀಗಿದೆಯೆಂದು ಕೇಳಿದಾಗ, ಯಾರಿಗಾದರೂ ಇದು ನಿಜವೇನಾ ಎಂದು ಅನುಮಾನ ಬರಬಹುದು. ಸೂಕ್ಷ್ಮ ವಿಷಯಗಳನ್ನು ಯಾರೋ ಒಬ್ಬರು ಹೇಳಬೇಕು ತಾನೆ! ಈ ಮಂತ್ರಕ್ಕೇ ಅಲ್ಲ ಯಾವ ಮಂತ್ರಕ್ಕಾದರೂ, ಆ ಮಂತ್ರಶಕ್ತಿಯಾಗಿರುವ ಗ್ರಹ ಮಾಡಬೇಕಾದ ಕೆಲಸವನ್ನು ಮಾಡುವುದು. ಗ್ರಹದೊಳಗಿರುವ ಆತ್ಮಶಕ್ತಿ ಆ ಕೆಲಸವನ್ನು ಮಾಡುತ್ತಿದೆಯೆಂದು ತಿಳಿಯಬೇಕು. ಚೇಳು ವಿಷ ಹಸ್ತದಿಂದ

ಭುಜದವರೆಗೂ ಬಾಧಿಸುವಾಗ, ಶರೀರದೊಳಗೆ ಹೋದ ಗ್ರಹ ಕೈಯಲ್ಲಿನ ನೋವನ್ನು ಇಲ್ಲದ ಹಾಗೆ ಮಾಡಿ ಹೊರಗೆ ಬಂದು ಮಾಂತ್ರಿಕನಲ್ಲಿ ಸೇರಿಹೋಗುತ್ತದೆ. ಚೇಳಿನ ವಿಷ ಅಲ್ಲದೆ ತಲೆ ನೋವಿನಿಂದ ನೋವುಪಡುವ ವನಿದ್ದಾನೆಂದುಕೊಳ್ಳೋಣ. ತಲೆನೋವನ್ನು ನಿವಾರಿಸುವ ಮಂತ್ರವಿರುವ ಮಾಂತ್ರಿಕನು ಮಂತ್ರ ಉಪಯೋಗಿಸಿದಾಗ, ಮಂತ್ರಶಕ್ತಿ ನೋವಿರುವವನ ಶರೀರದಲ್ಲಿ ಪ್ರವೇಶಿಸಿ ತಲೆ ನೋವನ್ನು ತೊಲಗಿಸಬೇಕೆಂದು ನೋಡಿದಾಗ, ಅಲ್ಲಿ ತಲೆನೋವಿಗೆ ಕಾರಣವಾದ ಒಂದು ಸೂಕ್ಷ್ಮ ಶರೀರವಾಗಿದ್ದರೆ ಮಂತ್ರಗ್ರಹ ಹೋಗುತ್ತಲೆ, ಅದು ಮಂತ್ರಗ್ರಹಕ್ಕೆ ದೊರಕದೆ ಹೊರಗೆ ಹೋಗುತ್ತದೆ. ಸೂಕ್ಷ್ಮ ಶರೀರ ಅಲ್ಲದೆ ಒಂದು ದೇವತೆ ಆಗಿದ್ದರೆ, ಆ ದೇವತೆ ಸಹ ತಲೆಯಲ್ಲಿ ಇಲ್ಲದೆ ಶರೀರದೊಳಗೆ ಪಕ್ಕಕ್ಕೆ ಹೋಗುತ್ತಾ ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನ ಮಾಡುತ್ತಿರುತ್ತದೆ. ಆದರೂ ಮಂತ್ರಶಕ್ತಿ ಅದನ್ನು ಹಿಂಬಾಲಿಸುವುದರಿಂದ ಶರೀರದೊಳಗೆ ಜಾಗಗಳನ್ನು ಬದಲಾಯಿಸುತ್ತಾ ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತದೆ. ಕೈಲಾಗದೆ ಹೋದರೆ ಕೊನೆಗೆ ಶರೀರದಿಂದ ಹೊರಗೆ ಹೋಗುತ್ತದೆ. ಒಂದು ವೇಳೆ ಶರೀರದಲ್ಲಿನ ನೋವಿಗೆ ಕಾರಣ ಬಲವಾದ ದೇವತೆಯಾಗಲಿ, ದೆವ್ವವಾಗಲಿ ಇರುವಾಗ ಆ ದೇವತೆ ಮಂತ್ರಶಕ್ತಿಯಿಂದ ದಾಳಿಮಾಡಿ ಸೋತುಹೋದರೆ ಹೊರಗೆ ಹೋಗುವುದು. ಒಂದುವೇಳೆ ಮಂತ್ರಬಲ ಕಡಿಮೆಯಾಗಿ ದೇವತೆ ಬಲ ಹೆಚ್ಚಾದಾಗ ಮಂತ್ರಬಲ ಶರೀರದೊಳಗಿನ ನೋವನ್ನು ತೊಲಗಿಸುವುದಿಲ್ಲ. ಆಗ ಮಾಂತ್ರಿಕನು ಆ ವಿಷಯವನ್ನು ಗ್ರಹಿಸಿ, ತನ್ನ ಮಂತ್ರಕ್ಕೆ ಬಲ ಕಡಿಮೆಯಾಗಿದೆಯೆಂದು ತಿಳಿದುಕೊಳ್ಳಬೇಕು. ತನ್ನ ಹತ್ತಿರ ಇನ್ನೂ ದೊಡ್ಡ ಮಂತ್ರವಿದ್ದರೆ ಅದನ್ನು ಪ್ರಯೋಗಿಸಬೇಕು. ಇಲ್ಲದೇ ಹೋದರೆ ತನ್ನಿಂದ ಆಗುವುದಿಲ್ಲವೆಂದು ಬಿಟ್ಟು ಹಾಕಬೇಕು.

ಮಂತ್ರಗಳೆಲ್ಲಾ ಒಂದೇ ಬಲವನ್ನು ಹೊಂದಿರುವುದಿಲ್ಲ. ಪ್ರಯೋಗಿಸಿದ ಮಂತ್ರಕ್ಕಿಂತ ರೋಗದ ಶಕ್ತಿ ದೊಡ್ಡದಾಗಿರುವಾಗ ಮಂತ್ರ ಕೆಲಸ ಮಾಡುವುದಿಲ್ಲ. ಆದ್ದರಿಂದ ಮಂತ್ರಗಳೆಲ್ಲ ಶಕ್ತಿವಂತವಾದವುಗಳಲ್ಲ. ಮಂತ್ರಶಕ್ತಿ ದೈವಶಕ್ತಿಯನ್ನು

ಏನು ಮಾಡುವುದಿಲ್ಲ. ಒಬ್ಬ ಮನುಷ್ಯನ ಶರೀರದಲ್ಲಿ ಒಬ್ಬ ಯೋಗಿ ಪ್ರವೇಶಿಸಿ ಇರುವಾಗ ಮಂತ್ರಗಾರನು ತನ್ನ ಮಂತ್ರದಿಂದ ಆ ಯೋಗಿಯನ್ನು ಯಾವ ಕಾರಣಕ್ಕೂ ಹೊರಗೆಳೆಯುವುದಿಲ್ಲ. ಇದನ್ನು ಅನುಸರಿಸಿ ನೋಡಿದರೆ ಎಲ್ಲಾ ಮಂತ್ರಗಳು ಎಲ್ಲಾ ಸಮಯಗಳಲ್ಲಿ ಕೆಲಸ ಮಾಡುವುದಿಲ್ಲವೆಂದು ತಿಳಿಯುತ್ತದೆ. ರೋಗಗಳಿಗೆ, ಮಂತ್ರಗಳಿಗೆ ಎಲ್ಲದಕ್ಕು ದೈವಶಕ್ತಿ ದೊಡ್ಡದು. ದೈವಶಕ್ತಿ ಮುಂದೆ ಯಾವ ದೇವತೆಗಳಾಗಲಿ, ಯಾವ ರೋಗಗಳಾಗಲಿ ನಿಲ್ಲುವುದಿಲ್ಲ, ಆದ್ದರಿಂದ ಯೋಗಿಯಾದವನನ್ನು ಯಾವ ಮಂತ್ರವಾಗಲಿ ಏನು ಮಾಡುವುದಿಲ್ಲ. ಯೋಗಿ ಅಂದುಕೊಂಡರೆ ಮಂತ್ರಶಕ್ತಿಗಳು ಮಾಯವಾಗಿ ಹೋಗುತ್ತವೆ. ರೋಗಗಳು ಭಯದಿಂದ ನಡುಗುತ್ತವೆ. ಯೋಗಿಯಾದವನು ಎಲ್ಲಾ ವಿಧ ಮಂತ್ರಗಳಿಗೆ ತಾನು ದೊಡ್ಡವನೆಂದು ತಿಳಿದಿರುವುದರಿಂದ ಯಾವ ಮಂತ್ರವನ್ನು ಅಭ್ಯಾಸಿಸುವುದಿಲ್ಲ. ಭೂಮಿಮೇಲೆ ಯಾವ ಮಂತ್ರಗಳನ್ನು ಓದುವವರಾದರೂ ಯೋಗಿಗಿಂತ ಚಿಕ್ಕವನೆಂದು ತಿಳಿಯಬೇಕು. ಮಂತ್ರಗಳಲ್ಲಿರುವ ಶಕ್ತಿ ದೈವಶಕ್ತಿ ಯಾದ ಆತ್ಮಶಕ್ತಿ ಎಂದು, ಆತ್ಮಶಕ್ತಿಯೆ ಮಂತ್ರಶಕ್ತಿಯಾಗಿ ಬದಲಾಗಿದೆಯೆಂದು ತಿಳಿದು, ಮಂತ್ರ ಶಕ್ತಿಯನ್ನು ಬಿಟ್ಟು ಆತ್ಮಶಕ್ತಿಯನ್ನು ವಶಮಾಡಿಕೊಂಡವನು ಎಲ್ಲರಿಗಿಂತ ದೊಡ್ಡವನಾಗುತ್ತಾನೆ. ಅಂತಹ ಯೋಗಿಯನ್ನು ಯಾವ ಮಂತ್ರಶಕ್ತಿ ಏನೂ ಮಾಡುವುದಿಲ್ಲ. ಮಂತ್ರ ಅದಕ್ಕೆ ಮಹಿಮೆ ಇರುವುದು ವಾಸ್ತವವೆ ಆದರೂ, ಮಂತ್ರ ಮಹಿಮೆಯನ್ನು ಅತಿಕ್ರಮಿಸಿ ಇರುವುದು ದೈವಶಕ್ತಿಯೆಂದು ತಿಳಿದು, ಅದನ್ನು ಹೊಂದಿದವನು ಭೂಮಿಮೇಲೆ ಎಲ್ಲರಿಗಿಂತ ದೊಡ್ಡವನೆಂದು ಹೇಳಬಹುದು.



**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

ತಪ್ಪದೆ ಓದಿರಿ!

ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀ

(578 ಶ್ಲೋಕಗಳ ವಚನ ಗ್ರಂಥ)

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋ
ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವ
ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರ
ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬ
ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ
ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇ
ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇ
ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂ

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧ**

ಓದಿಸಿರಿ!!

# ದ್ರಾವಿಡ ಬ್ರಾಹ್ಮಣ

ಭಾರತದೇಶ ಸ್ಥಿತಿಯನ್ನು ಕಣ್ಣಿಗೆ ಕಾಣಿಸುವಂತೆ ಶಾಸ್ತ್ರಬದ್ಧವಾಗಿ ವಿವರಿಸುತ್ತಾ, ಭಾರತದೇಶವನ್ನೇ
ದ್ರಾವಿಡ ದೇಶವೆನ್ನುತ್ತಿದ್ದರೆಂಬ ವಿಷಯವನ್ನು ತಿಳಿಸುತ್ತಾ, ದೈವಜ್ಞಾನ ತಿಳಿದ ವ್ಯಕ್ತಿಯನ್ನು
ಬೇಕೆಂದು ತಿಳಿಸುತ್ತಾ, ತ್ರೈತ ಸಿದ್ಧಾಂತ ತಿಳಿದ ಜ್ಞಾನಿಯನ್ನೇ ದ್ರಾವಿಡ ಬ್ರಾಹ್ಮಣ ಎನ್ನಬೇಕೆಂದು




# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀ ಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 9611133635**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

**(Regd.No.: 159/2015)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

***www. suvarthakraisthavasangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

***www. khudaislamicspiritualsociety.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

***www.dravidashreshtisangham.org***

# ಮಂತ್ರ–ಮಹಿಮೆ

(ನಿಜವಾ–ಸುಳ್ಳಾ)

## ಇಂದೂ (ಹಿಂದೂ) ಮತದಲ್ಲಿ ಸಿದ್ಧಾಂತಕರ್ತರು


ಅದ್ವೈತ ಸಿದ್ಧಾಂತಕರ್ತ ಆದಿ ಶಂಕರಾಚಾರ್ಯರು
Birth:509 BC - Death:477 BC (32 Years) ಕೇರಳ


ವಿಶಿಷ್ಟಾದ್ವೈತ ಸಿದ್ಧಾಂತಕರ್ತ ರಾಮಾನುಜಾಚಾರ್ಯರು
Birth : 1017 – Death : 1137 (120 years) ತಮಿಳನಾಡು


ದ್ವೈತ ಸಿದ್ಧಾಂತಕರ್ತ ಮಧ್ವಾಚಾರ್ಯರು
Birth : 1238 – Death : 1317 (79 years) ಕರ್ನಾಟಕ


ತ್ರೈತ ಸಿದ್ಧಾಂತ ಆದಿಕರ್ತ ಪ್ರಬೋಧಾನಂದ ಯೋಗೀಶ್ವರರು
Birth : 1950 ಆಂಧ್ರಪ್ರದೇಶ್ (ರಾಯಲಸೀಮ)